# ಶೀಘ್ರ ಸಾಕ್ಷರತಾ ಸಾಧನ

(ಸಮವಾಯ ಪದ್ಧತಿಯ ವಿವೇಚನೆ ಹಾಗೂ ವಿವರಣೆ)

ಲೇಖಕರು :

ಶ್ರೀ. ಶಾಮರಾವ ಗಜೇಂದ್ರಗಡ, ಬಿ.ಎ., ಬಿ.ಟಿ.

ವಿಜಾಪೂರ ಜಿಲ್ಲಾ ಸರ್ವೋದಯ ಸಮಿತಿಯ

" **ಸಮಾಜ ಶಿಕ್ಷಣ** "—ಪ್ರಕಟನೆ ೧

# ಮೊದಲು ಮಾತು

ಈ ಚಿಕ್ಕ ಪುಸ್ತಕದಲ್ಲಿ ವಿವರಿಸಿದ ಪದ್ಧತಿಯನ್ನೂ ಪಟಗಳನ್ನೂ ನಾನು ಕಳೆದ ಹದಿನೈದು ವರುಷಗಳಿಗಿಂತಲೂ ಹೆಚ್ಚಾಗಿ ಉಪಯೋಗಿಸುತ್ತಿರುವೆ. ವಿಜಾಪೂರ ಜಿಲ್ಹೆಯ ಎಲ್ಲ ತಾಲೂಕುಗಳಲ್ಲಿ, ಪ್ರಮುಖ ಹಳ್ಳಿಗಳಲ್ಲಿ, ಇದಲ್ಲದೆ ಗದಗು ಧಾರವಾಡಗಳಲ್ಲಿ ಈ ಪದ್ಧತಿಯ ಪಾಠಗಳನ್ನು ಸಮಾಜ ಶಿಕ್ಷಣದ ತರಬೇತಿಯ ವರ್ಗಗಳಲ್ಲಿ ಅನೇಕಸಲ ಕೊಡಬೇಕಾಯಿತು. ಸಾವಿರಾರು ಶಿಕ್ಷಕರು ಈ ನನ್ನ ಪಾಠಗಳನ್ನು ನೋಡಿರುವರು—ಅನೇಕ ಶಿಕ್ಷಣತಜ್ಞರೂ ಕೂಡ. ವಯಸ್ಕರ ಮನೋಭೂಮಿಕೆಗೆ ಹೊಂದಿಕೆಯಾಗುವಂತೆ ಶೀಘ್ರ ಸಾಕ್ಷರತೆಯನ್ನು ತಂದುಕೊಡುವಲ್ಲಿ ಈ ಪಟಗಳೂ ಈ ಪದ್ಧತಿಯೂ ಉಪಯುಕ್ತವಾದವುಗಳೆಂದು ಅವರಿಗೆ ಕಂಡುಬಂದಿತು. ಇವುಗಳನ್ನು ಅಚ್ಚು ಹಾಕಿಸಬೇಕೆಂದು ಎಲ್ಲ ಸ್ಥಳಗಳಲ್ಲಿ ಶಿಕ್ಷಕರು ನನ್ನನ್ನು ಕೇಳಿಕೊಂಡರು. ಹಾಗೆ ಮಾಡುವದು ನನ್ನಿಂದ ಇದುವರೆಗೆ ಆಗಿರಲಿಲ್ಲ.

ಇಂದು ನನಗೆ ಆ ಸುಯೋಗವು ಒದಗಿದೆ. ವಿಜಾಪೂರ ಜಿಲ್ಹೆಯ ಸರ್ವೋದಯದ ಒಂದು ಕೇಂದ್ರವಾದ 'ಬಾವಲತ್ತಿ' ಎಂಬ ಹಳ್ಳಿಯಲ್ಲಿ ಇದೇ ಬೇಸಗೆಯ ಸೂಟಿಯಲ್ಲಿ ಹತ್ತು ದಿನಗಳನ್ನು ಸುತ್ತಲಿನ ಹಳ್ಳಿಗರೊಡನೆ ಸಮರಸನಾಗಿ ಕಳೆದೆ. ಅಲ್ಲಿಯೂ ಈ ಪದ್ಧತಿಯ ಪ್ರಯೋಗದಿಂದ ಇದರ ಯಶಸ್ವಿತೆಯನ್ನು ಹೆಚ್ಚು ದೃಢಪಡಿಸಿಕೊಂಡೆ.

ಈ ಪುಸ್ತಕದ ಪ್ರಕಟನೆಯ ಶ್ರೇಯಸ್ಸು ವಿಜಾಪೂರ ಜಿಲ್ಹಾ ಸರ್ವೋದಯ ಸಮಿತಿಯವರದು-ಅದರ ಸಂಚಾಲಕರದು. ಸ್ವತಂತ್ರ ಭಾರತದ ಪ್ರಗತಿಗೆ ತಳಹದಿಯೆನಿಸುವ ಸಮಾಜ ಶಿಕ್ಷಣವು ಕನ್ನಡ ನಾಡಿನಲ್ಲಿ ಒಂದಡಿಯನ್ನಾದರೂ ಈ ಪುಸ್ತಕದ ಸಹಾಯದಿಂದ ಮುಂದಿಟ್ಟರೆ ಸಾಕು—ನನ್ನ ಶ್ರಮವು ಸಾರ್ಥಕವಾಯಿತು.

ಸಮಾಜ ಶಿಕ್ಷಣದ ಕಾರ್ಯದಲ್ಲಿ ನನ್ನನ್ನು ಮೊದಲು ಪ್ರೇರೇಪಿಸಿ ನನಗೆ ಮಾರ್ಗದರ್ಶನ ಮಾಡಿದ ಶ್ರೀ. ಹ. ಮ. ಬಬಲೇಶ್ವರ ಹಾಗೂ ಶ್ರೀ. ಜೆ. ಪಿ. ನಾಯಿಕರಿಗೆ ನನ್ನ ಕೃತಜ್ಞತೆಯನ್ನರ್ಪಿಸುವೆ.

ಹುಬ್ಬಳ್ಳಿ
೧-೮-೧೯೫೩

**ಗಜೇಂದ್ರಗಡ ಶಾಮರಾಯ**

ಬಾವಲತ್ತಿಯ

## ಶ್ರೀ ರಂಗನಾಥಸ್ವಾಮಿಗೆ

**ಅರ್ಪಿತ**

ಸಂಚಾಲಕ.

# ಮುನ್ನುಡಿ

ಸರ್ವೋದಯದ ಕಾರ್ಯಕ್ರಮದಲ್ಲಿ ಸಾಂಸ್ಕೃತಿಕ ಚಟುವಟಿಕೆಯ ಅಂಗವಾದ ಸಾಮಾಜಿಕ ಶಿಕ್ಷಣವೂ ಒಂದು ಕಾರ್ಯಭಾಗವಾಗಿದೆ. ಸಾಮಾಜಿಕ ಶಿಕ್ಷಣಪ್ರಸಾರಕ್ಕೆ ಸಹಾಯವಾಗುವ ಸಾಹಿತ್ಯವನ್ನು ಶಕ್ಯವಿದ್ದಷ್ಟು ಪ್ರಕಟಿಸ-ಬೇಕೆಂಬುವದು ನಮ್ಮ ಮನೀಷೆಯಾಗಿದೆ. ಇದಕ್ಕೆ ಪೂರ್ವಭಾವಿಯಾಗಿ ಶೀಘ್ರ ಸಾಕ್ಷರತಾ ಸಾಧನದ ಈ ಚಿಕ್ಕ ಪುಸ್ತಕವನ್ನು ಶಿಕ್ಷಕರ ಬೇಡಿಕೆ-ಯನ್ನು ಮನ್ನಿಸಿ ಪ್ರಕಟಿಸಿದೆ. ಸಮಾಜ ಶಿಕ್ಷಣದಲ್ಲಿ ಹಳ್ಳಿಗರಿಗೆ ಉಪಯುಕ್ತ-ವಾದ ವಿವಿಧ ವಿಷಯಗಳ ಪರಿಚಯವನ್ನು ಮಾಡಿಕೊಡುವ ಚಿಕ್ಕ ಪುಸ್ತಕ-ಗಳನ್ನು ಪ್ರಕಟಿಸುವ ವಿಚಾರವನ್ನೂ ನಮ್ಮ ಸಮಿತಿಯು ಮಾಡಿದೆ.

ಸಮಾಜ ಶಿಕ್ಷಣದಲ್ಲಿ ಬಹುಕಾಲ ದುಡಿಯುತ್ತಿರುವ ಶ್ರೀ. ಗಜೇಂದ್ರಗಡ ಶಾಮರಾಯರು ತಮ್ಮ ಪದ್ಧತಿಯ ವಿವರಣೆಯಂತಿರುವ ಈ ಪುಸ್ತಕವನ್ನು ಬರೆದುಕೊಟ್ಟಿದ್ದಕ್ಕಾಗಿ ಸರ್ವೋದಯ ಸಮಿತಿಯು ಅವರಿಗೆ ಕೃತಜ್ಞವಾಗಿದೆ.

**ಬಾಗಲಕೋಟೆ**

**ಜೋರಾಪೂರ ಗುರುರಾಯ**
**ಸಂಚಾಲಕ–ವಿಜಾಪೂರ ಜಿಲ್ಲಾ ಸರ್ವೋದಯ ಸಮಿತಿ**

ಸಂಯುಕ್ತ ಕರ್ನಾಟಕ ಮುದ್ರಣಾಲಯ, ಹುಬ್ಬಳ್ಳಿ. ೨೧೯೩–೫೪–೧೦೦೦.

# ಶೀಘ್ರ ಸಾಕ್ಷರತಾ ಸಾಧನ

ಕಥಾರೂಪವಾದ ಪಟಗಳಲ್ಲಿ* ಅನುಸರಿಸಿದ ಈ ಪದ್ಧತಿಗೆ ಹಲವು ಹೆಸರುಗಳು. 'ಸಮವಾಯ ಪದ್ಧತಿ' ಯೆನ್ನುವದು ಅವುಗಳಲ್ಲಿ ಹೆಚ್ಚು ಸಮಂಜಸವೆನಿಸುವದರಿಂದ, ಅರ್ಥಪೂರ್ಣವಾದುದರಿಂದ, ಆ ಹೆಸರಿನಿಂದಲೇ ಇದನ್ನು ಹೇಳುತ್ತ ಬಂದಿದೆ. ಕೆಲವರು ಇದಕ್ಕೆ 'ಕಥಾಪದ್ಧತಿ' ಯೆಂತಲೂ, 'ಸ್ವರ-ಸಂಕೇತ ಸಾದೃಶ್ಯ' ಪದ್ಧತಿಯೆಂತಲೂ, 'ಲಾಬಾಕ್' ಪದ್ಧತಿಯೆಂತಲೂ ಹೇಳುವದುಂಟು. ಇದರಲ್ಲಿ ಸ್ವರ, ಸಂಕೇತ, ಅರ್ಥ ಹಾಗೂ ಕಥೆ — ಇವುಗಳ ಅನ್ಯೋನ್ಯವಾದ ಹೊಂದಿಕೆಯಿರುವದರಿಂದ ಇದಕ್ಕೆ 'ಸಮವಾಯ' ಪದ್ಧತಿಯೆಂದು ಹೇಳಿದರೆ ತಪ್ಪಾಗದು.

ಈ ಪದ್ಧತಿಯ ಪಟಗಳ ರಚನೆಯು ಹೀಗಿದೆ: ಕೆಲವು ಮೂಲಾಕ್ಷರಗಳನ್ನು ಆಯ್ದುಕೊಳ್ಳುವದು. ಈ ಮೂಲಾಕ್ಷರಗಳು ವರ್ಣಮಾಲೆಯಲ್ಲಿ ಪ್ರಧಾನವಾದವುಗಳು. ಹೆಚ್ಚು ಬಳಿಕೆಯಲ್ಲಿ ಇರುವಂಥವುಗಳು. ಈ ಮೂಲಾಕ್ಷರಗಳಿಂದ ಪ್ರಾರಂಭವಾಗುವ ಶಬ್ದಗಳು ಭಾವವಾಚಕಗಳಾಗಿರದೆ ವಸ್ತುವಾಚಕಗಳಾಗಿರಬೇಕು. ಕಥೆಯಲ್ಲಿ ಬರುವ ವಸ್ತುಗಳ ಇಲ್ಲವೆ ವ್ಯಕ್ತಿಗಳ ಹೆಸರುಗಳಾಗಿರಬೇಕು. ಈ ವಸ್ತುಗಳು ಅಥವಾ ವ್ಯಕ್ತಿಗಳು ಹಳ್ಳಿಯ ಜೀವನದ ಘಟಕಗಳಾಗಿರಬೇಕು. ಶಕ್ಯವಿರುವಷ್ಟು ಹಳ್ಳಿಗರಿಗೆ ಪರಿಚಿತವಾದವುಗಳಿರಬೇಕು. ತೀರ ಅನಿವಾರ್ಯವಾದಲ್ಲಿ ನಗರದ ವಸ್ತುಗಳನ್ನು (ಉದಾ: ಈ ಪಟಗಳಲ್ಲಿ ತೆಗೆದುಕೊಂಡ 'ನಳ', 'ಸಾಯಕಲ್ ಯಂತ್ರ') ಎರವಲಾಗಿ ತರಬೇಕಾದರೂ ಹಳ್ಳಿಯ ಜೀವನದ ಸಂದರ್ಭ–ಸನ್ನಿವೇಶಗಳಿಗೆ ಅವುಗಳನ್ನು ಹೇಗಾದರೂ ಹೊಂದಿಸಿಕೊಳ್ಳಬಹುದು. ಮೂಲಾಕ್ಷರಗಳಿಗಾಗಿ (Key-words) ಆರಿಸಿದ ವಸ್ತುಗಳು ಚಿತ್ರಲೇಖನಕ್ಕೆ ಅನುಗುಣವಾಗಿರಬೇಕು. ಚಿತ್ರಕಲೆಯನ್ನರಿಯದ ಸಾಮಾನ್ಯ ಶಿಕ್ಷಕನಿಗಾದರೂ ಕೂಡ ಆ ವಸ್ತುಗಳ ಚಿತ್ರಗಳನ್ನು ಸುಲಭವಾಗಿ ತೆಗೆಯಲು ಬರುವಂತಿರಬೇಕು. ಈ

---

* ಈ ಪಟಗಳನ್ನು ಮುಂಬಯಿ ವಿದ್ಯಾರ್ಥಿ ಸಂಘದ ಶ್ರೀ. ಶಿತಳರು ಕರ್ನಾಟಕದಲ್ಲಿ ಕಾರ್ಯ ಮಾಡುವಾಗ್ಗೆ ರಚಿಸಿದರು. ಅವುಗಳಲ್ಲಿ ಅಗತ್ಯವೆನಿಸಿದ ಕೆಲವು ವ್ಯತ್ಯಾಸಗಳನ್ನು ಮಾಡಿ ಬಳಿಸಿಕೊಂಡಿದೆ.

ವಸ್ತುಗಳು ಹಳ್ಳಿಯ ಜನರಿಗೆ ಅನೇಕ ಉಪಯುಕ್ತ ವಿಷಯಗಳ ಜ್ಞಾನ ಮಾಡಿಕೊಡಲು ಸಹಾಯವಾಗುವಂತಿರಬೇಕು. ಒಂದೊಂದು ಚಿತ್ರದ ಸುತ್ತಲೂ ಪ್ರಾಸಂಗಿಕವಾಗಿ ಅನೇಕ ಸಂಗತಿಗಳನ್ನು ಹೆಣೆಯಲು ಯತ್ನಿಸಿ-ದರೂ ಕಥೆಯ ಏಕಸೂತ್ರತೆಗೆ ಮಾತ್ರ ಬಾಧೆ ತಟ್ಟದಂತೆ ನೋಡಿಕೊಳ್ಳ-ಬಹುದು. ಈ ಪದ್ಧತಿಯಲ್ಲಿ ವಸ್ತುವಿನ ಆಕಾರವೂ ಅಕ್ಷರದ ಆಕಾರವೂ ಒಂದೇಯಾಗುವದು. ಗುಡಿಯ ಆಕಾರವು 'ಗು' ಎಂಬ ಅಕ್ಷರವನ್ನು ಹೆಚ್ಚಾಗಿ ಹೋಲುವದು. ಈ ಹೋಲಿಕೆಯು ಅಕ್ಷರಗಳನ್ನು ನೆನಪಿನಲ್ಲಿಡ-ಲಿಕ್ಕೂ ನೆನಪುಮಾಡಿಕೊಡಲಿಕ್ಕೂ ತುಂಬಾ ಸಹಾಯಕವಾಗುವದು. ಈ ಚಿತ್ರಗಳು ಕಥೆಗೆ ಸಂಬಂಧಿಸಿರುವದರಿಂದ ಸ್ವರ-ಸಂಕೇತಗಳ ಸಂಬಂಧೀ-ಕರಣವೂ ಹಾಗೂ ಸ್ಥಿರೀಕರಣವೂ ತಾನಾಗಿಯೇ ಸಾಧಿಸುವದು. ಕಥೆಯ ನಿರೂಪಣೆಯಲ್ಲಿ ಅಕ್ಷರಗಳ ಸಂಕೇತಗಳಾದ ಈ ಚಿತ್ರಗಳು ಸರಿಯಾದ ಕ್ರಮದಲ್ಲಿರಬೇಕು. ಅವು ಮಹತ್ವದ ಮೆಟ್ಟಲುಗಳಾಗಿರುವವು. ಪ್ರತಿಯೊಂದು ಮೆಟ್ಟಲಿನಲ್ಲಿ ಶಿಕ್ಷಕನು ಕೆಲಕಾಲ ನಿಂತು ಸಂದರ್ಭಕ್ಕೆ ಉಚಿತವಾದ ನಾಲ್ಕು ಮಾತುಗಳನ್ನು ಹೇಳಿ ಮುಂದಿನ ಮೆಟ್ಟಲಿಗೆ ಸ್ವಾಭಾವಿಕವಾಗಿ ಜಾರಿಹೋಗ-ಬೇಕು.

## ಈ ಪದ್ಧತಿಯ ವೈಶಿಷ್ಟ್ಯವೇತರಲ್ಲಿದೆ ?

ಈ ಸಮವಾಯ ಪದ್ಧತಿಯು ವಯಸ್ಕರ ಮನೋಭೂಮಿಕೆಗೆ ಹೆಚ್ಚಾಗಿ ಹೊಂದಿಕೊಳ್ಳುವದು. ದುಡಿದು ದಣಿದ ದೇಹ. ನೂರಾರು ಚಿಂತೆಗಳಿಂದ ನೊಂದ ಮನಸ್ಸು. ವಯಸ್ಕರ ಈ ಮನೋಭೂಮಿಕೆಯಲ್ಲಿ ಚಿಕ್ಕಮಕ್ಕಳಿಗೆ ಅಕ್ಷರಗಳನ್ನು ಕಲಿಸುವ ರೀತಿಯು ಅವರಿಗೆ ತುಂಬಾ ನಿರುಪಯೋಗಿ-ಯಾಗಿರುವದು, ನಿಷ್ಫಲವಾಗುವದು. ಸಂದರ್ಭ ಸನ್ನಿವೇಶಗಳ ಸಹಾಯ-ವಿಲ್ಲದೆ ಅರ್ಥರಹಿತವಾದ, ನಿರ್ಜೀವ ಅಕ್ಷರಗಳನ್ನು ತೀಡುವದರಲ್ಲಿ ವಯಸ್ಕರ ಮನಸ್ಸು ಸ್ಥಿರವಾಗಿ ನಿಲ್ಲದು. ಎಲ್ಲ ರೀತಿಯಿಂದಲೂ ನಿರುತ್ಸಾಹಪೂರ್ಣವಾದ ಅವರ ಜೀವನದಲ್ಲಿ ಕಲಿಯುವ ಬಗ್ಗೆ ಆಸ್ಥೆ ತಾನಾಗಿ ಜನಿಸದು. ಜೀವನದ ಹೊಸತಿಲಿನ ಮೇಲೆ ಆದೇ ಕಾಲಿಡುವ ಚಿಕ್ಕಮಕ್ಕಳ ಮಾತು ಬೇರೆ. ಅವರಿಗೆ ನೋಡಿದಲ್ಲೆಲ್ಲ ನಲಿವು, ಆನಂದ. ಅದೇ ಅರಳಿ ಬೆಳೆಯುತ್ತಿರುವ ಅವರ ಆತ್ಮಶಕ್ತಿಗಳ ನೆರವು ಅವರಿಗಿರುವದು. ಈ ವಯೋಮಾನದಲ್ಲಿ ಕಲಿಯುವದು

ಕಡ್ಡಾಯವಾದರೂ ಚಿಕ್ಕಮಕ್ಕಳಿಗೆ ಓರಿಗೆಯವರ ಜೊತೆಯಲ್ಲಿ ಅದೊಂದು ಕ್ರೀಡೆಯೆನಿಸುವದು. ಚಿಕ್ಕಮಕ್ಕಳ ಈ ಸ್ವಯಂಪ್ರೇರಣೆಯಿಲ್ಲದ ವಯಸ್ಕರಿಗೆ ಕಲಿಯುವದರಲ್ಲಿ ಆಸ್ಥೆ–ಆತುರತೆಗಳನ್ನು ತಂದುಕೊಡಲು ಸಮವಾಯ ಪದ್ಧತಿಯು ಸಹಾಯಕವಾಗುವದೆಂದು ಹೇಳಬಹುದು. ಇನ್ನೂ ಒಂದು ಸಂಗತಿಯು ಈ ಸಮವಾಯ ಪದ್ಧತಿಯನ್ನು ಸಮರ್ಥಿಸುವದು. ಚಿಕ್ಕ-ಮಕ್ಕಳಲ್ಲಿ ಅದೇ ಅಂಕುರಿಸುತ್ತಿರುವ ತರ್ಕಶಕ್ತಿಯು ವಯಸ್ಕರಲ್ಲಿ ಚನ್ನಾಗಿ ಬೆಳೆದುಬಂದಿರುವದು. ಈ ತರ್ಕಶಕ್ತಿಯ ಸಹಾಯದಿಂದ ಹಿಂದು ಮುಂದಿನ ಸಂಗತಿಗಳನ್ನು ಅವರು ಸರಿಯಾಗಿ ಹೊಂದಿಸಿಕೊಳ್ಳಬಲ್ಲರು. ಇದರಿಂದ ಕಲಿತ ಅಕ್ಷರಗಳನ್ನು ನೆನಪಿನಲ್ಲಿ ಇಡಲು ಅವರಿಗೆ ಅನುಕೂಲವಾಗುವದು. ಗುಡಿ–ಗಂಟೆ, ಪಣತಿ–ಪೂಜಾರಿ— ಇವೆಲ್ಲವುಗಳನ್ನು ಈ ತರ್ಕಶಕ್ತಿಯು ಜೋಡಿಸುವದು, ಕೀಲಿಸುವದು. ಕಲಿಯುವ ಕಾರ್ಯದಲ್ಲಿ ಈ ಸಂಬಂಧೀ-ಕರಣವು ಎಷ್ಟೊಂದು ಅಗತ್ಯವಾದುದು, ಪ್ರಧಾನವಾದುದು—ಎಂಬುವದು ಶಿಕ್ಷಕರಿಗೆಲ್ಲ ತಿಳಿದ ವಿಷಯವಾಗಿದೆ. ಇದಲ್ಲದೆ ಕಲಿಯುವ ಕಾರ್ಯದಲ್ಲಿ ಚಿಕ್ಕಮಕ್ಕಳಿಗೂ ವಯಸ್ಕರಿಗೂ ಇರುವ ಇನ್ನೊಂದು ವ್ಯತ್ಯಾಸವೂ ಮಹತ್ವ-ದ್ದಾಗಿದೆ. ಚಿಕ್ಕಮಕ್ಕಳಿಗೆ ಜೀವನದಲ್ಲಿ ಎಲ್ಲವೂ ಹೊಸತು. ಎಲ್ಲವನ್ನೂ ತಿಳಿದುಕೊಳ್ಳಬೇಕೆನ್ನುವ ಲವಲವಿಕೆಯು, ಕುತೂಹಲಪ್ರವೃತ್ತಿಯು ಅವರಲ್ಲಿ ಸ್ವಾಭಾವಿಕವಾಗಿರುವದು, ಹೆಚ್ಚುತ್ತಲಿರುವದು. ವಯಸ್ಕರಲ್ಲಿ ಈ ಕುತೂ-ಹಲಶಕ್ತಿಯು ಕಡಿಮೆಯಾಗಿರುವದು. ವಯಸ್ಕರ ಮನಸ್ಸು ಅನೇಕ ಕಾರಣಗಳಿಂದ ವ್ಯಗ್ರವಾಗಿರುವದು, ಉದ್ವಿಗ್ನವಾಗಿರುವದು. ಈ ವ್ಯಗ್ರತೆ. ಉದ್ವಿಗ್ನತೆಗಳನ್ನು ತಾತ್ಕಾಲಿಕವಾಗಿಯಾದರೂ ತೆಗೆದುಹಾಕಲು ಸಮವಾಯ ಪದ್ಧತಿಯಲ್ಲಿರುವ ಕಥೆ ಹಾಗು ಸಂಭಾಷಣೆಗಳು ಸಹಾಯಕವಾಗುವವು. ಇನ್ನೊಂದು ಸಂಗತಿಯೂ ನೆನಪಿನಲ್ಲಿ ಇಡತಕ್ಕುದಾಗಿದೆ. ಚಿಕ್ಕಮಕ್ಕಳ ಅನುಭವವು ತೀರ ಕಿರಿದು. ಅವರ ವಿಷಯಜ್ಞಾನವು ತೀರ ಮರ್ಯಾದಿತ-ವಾದುದು. ವಯಸ್ಕರ ಅನುಭವವೂ ಹಿರಿದು. ಅವರ ವಿಷಯಜ್ಞಾನವೂ ಚಿಕ್ಕ ಮಕ್ಕಳಿಗಿಂತ ಎಷ್ಟೋ ಪಟ್ಟು ವಿಶಾಲವಾದುದು, ವಿವಿಧವಾದುದು. ಚಿಕ್ಕ ಮಕ್ಕಳಿಗೆ ಅಕ್ಷರಗಳ ಗುರುತು ಮಾಡಿಕೊಡುವದಲ್ಲದೆ ವಸ್ತುಗಳ ಪರಿಚಯವನ್ನೂ ವಿಷಯಜ್ಞಾನವನ್ನೂ ಮಾಡಿಕೊಡಬೇಕಾಗುವದು. ವಯಸ್ಕರಿಗೆ ಸ್ವರ–ಸಂಕೇತಗಳ ಸಂಬಂಧವನ್ನು—ಅಕ್ಷರಗಳ ಗುರುತನ್ನು

ಮಾತ್ರ ಮಾಡಿಕೊಟ್ಟರೆ ತೀರಿತು. ಇದರಿಂದ ಈ ಸಮವಾಯ ಪದ್ಧತಿಯಲ್ಲಿ ಸ್ವರ–ಸಂಕೇತಗಳ ಸಂಬಂಧೀಕರಣಕ್ಕಾಗಿ ಯೋಜಿಸಿದ ಕಥೆಯು ಕೃತ್ರಿಮವೂ ಕೆಳಮಟ್ಟದ್ದೂ ಎನಿಸಿದರೂ ಕಥೆ ಹಿನ್ನೆಲೆಯಲ್ಲಿ ಉಳಿದು, ಕಲಿಯುವಾಗ್ಗೆ ಅದೊಂದು ಒಳ್ಳೇ ಸಾಧನವೆಂದು ಮಾತ್ರ ಮನಸ್ಸಿನಲ್ಲಿ ಉಳಿಯುವದು. ಈ ಪಟಗಳ ಸಹಾಯದಿಂದ ಅಕ್ಷರಗಳನ್ನು ಕಲಿಸುವಾಗ್ಗೆ, ಒಂದು ದಕ್ಷತೆಯನ್ನು ಅಗತ್ಯವಾಗಿ ವಹಿಸಬೇಕಾಗುವದು. ಅದೆಂದರೆ—ಸ್ವರ–ಸಂಕೇತಗಳ ಸಂಯೋಜನೆಯಲ್ಲಿ ವಯಸ್ಕರಿಂದ ಸ್ಪಷ್ಟವಾದ, ಶುದ್ಧವಾದ ಉಚ್ಚಾರಣೆಯಾಗುವಂತೆ ಯಾವಾಗಲೂ ನೋಡಿಕೊಳ್ಳಬೇಕು.

ಸಮವಾಯದ ಸಾಕ್ಷರತೆಯ ಪಟಗಳಲ್ಲಿ ಪ್ರತಿಯೊಂದು ಚಿತ್ರವು ಒಂದು ಅಕ್ಷರದ ಸಂಕೇತವಾಗಿರುವದಲ್ಲದೆ ಉಪಯುಕ್ತವಾದ ಸಂಭಾಷಣೆಗೆ ಎಡೆಗೊಡುವದೆಂದು ಹಿಂದೆ ಹೇಳಿದೆ. ಒಂದೆರಡು ಉದಾಹರಣೆಗಳನ್ನು ನೂತನ ಶಿಕ್ಷಕರಿಗೆ ಮಾರ್ಗದರ್ಶನವೆಂದು ಮಾತ್ರ ಇಲ್ಲಿ ಕೊಡಬಹುದು. ಗುಡಿಯು 'ದೇವಮಂದಿರ'ವೆಂತಲೂ ವಿವಿಧ ಧರ್ಮಗಳಲ್ಲಿ ಈ ದೇವಮಂದಿರಗಳ ರೂಪು–ರೀತಿ ಹೆಸರುಗಳು ಬೇರೆ ಬೇರೆಯಾಗಿದ್ದರೂ ದೇವನೊಬ್ಬನಿರುವನೆಂಬ ಸರ್ವ ಧರ್ಮಸಮನ್ವಯ ದೃಷ್ಟಿಯನ್ನು ತರಲು ಯತ್ನಿಸಬಹುದು. 'ನಳ'ದ ಸಂದರ್ಭದಲ್ಲಿ ನೀರಿನ ಪೂರೈಕೆ ಸ್ವಚ್ಛತೆಗಳನ್ನೆತ್ತಿ ತೋರಿಸಬಹುದು. ಡಬರೀಗೌಡರ ಕಥೆಯಲ್ಲಿ ಪಟ್ಟಣಿಗರ ರೀತಿಯನ್ನು ಅನುಕರಿಸಬೇಕೆಂಬ ಹಳ್ಳಿಗರ ಮೋಹ, ಹಳ್ಳಿಗಳಲ್ಲಿರುವ ಇಕ್ಕಟ್ಟಾದ, ಏರುತಗ್ಗಾದ ಸಂದಿಗಳು ಇವೇ ಮೊದಲಾದವುಗಳ ಬಗ್ಗೆ ಪ್ರಸ್ತಾಪಿಸಬಹುದು. ಆದರೆ ಹೀಗೆಯೇ ಹೇಳಬೇಕು, ಇದನ್ನೇ ಹೇಳಬೇಕು ಎನ್ನುವ ನಿಬಂಧನೆಯು ಇದರಲ್ಲಿಲ್ಲ. ಮೇಲೆ ಹೇಳಿದ್ದು ಕೇವಲ ನಿದರ್ಶನಕ್ಕಾಗಿ ಮಾತ್ರ. ಅನುಭವಿಕನಾದ ಶಿಕ್ಷಕನು ಪ್ರಸಂಗೋಚಿತವಾಗಿ ಬೇರೆ ವಿಷಯಗಳನ್ನೂ ಸಮಂಜಸವಾಗಿ ತೆಗೆದುಕೊಳ್ಳುವಂತಿದೆ.

ಕಡಿಮೆ ಪರಿಶ್ರಮದಿಂದ ಹೆಚ್ಚಿನ ಫಲವನ್ನು ತಂದುಕೊಡುವ ಸಾಧನಕ್ಕೆ 'ಪದ್ಧತಿ'ಯೆಂದು ಹೇಳುವದುಂಟು. ಇಂಥದೊಂದೇ ಪದ್ಧತಿಯು ಸರ್ವಶ್ರೇಷ್ಠವೆಂದು ಎಲ್ಲ ಸಮಯ ಸಂದರ್ಭಗಳಲ್ಲಿ ಅದಕ್ಕೇ ಅಂಟಿಕೊಳ್ಳುವದು ಸರಿಯಾಗಲಾರದು. ಅನುಭವ ಹಾಗೂ ಪ್ರಯೋಗಗಳಿಂದ ಪದ್ಧತಿಯು ಬದಲಾಗುವದು ಅಗತ್ಯವೆನಿಸುವದು. ಸಮವಾಯಪದ್ಧತಿಯೂ ಈ ನಿಯಮಕ್ಕೆ ಅಪವಾದವಾಗಿಲ್ಲ. ಆದರೆ ಸಮವಾಯಪದ್ಧತಿಯ ತಿರುಳಿನಂತೆ–

ರುವ, ನಿರಕ್ಷರಿಗಳ ಕೂಡ ನಾವು ಕಟ್ಟಿಕೊಳ್ಳುವ ಆತ್ಮೀಯತೆಯ ಸಂಬಂಧ, ವಾತ್ಸಲ್ಯದಿಂದ ಕೂಡಿದ ವರ್ತನೆ, ಇವು ಮುಖ್ಯವಾದವುಗಳು, ಚಿರಂತನವಾದ ಗಳೆಂದು ಹೇಳಬಹುದು. ಸಮಾಜಶಿಕ್ಷಣದಲ್ಲಿ ಈ ಪಟಗಳನ್ನು ಉಪ-ಯೋಗಿಸುವಾಗ್ಗೆ ಶಿಕ್ಷಕನು ತಾನು ಕುರ್ಚಿಯ ಮೇಲೆ ಕುಳಿತು ವಯಸ್ಕರನ್ನು ಕೆಳಗೆ ಕೂಡಿಸಿದರೆ ಅವರು ಕೆಳಗೇ ಉಳಿಯುವರು. ಅವರ ಜೀವನವನ್ನು ಮೇಲಕ್ಕೆತ್ತುವ ಆತನ ಪರಿಶ್ರಮವೆಲ್ಲ ವಿಫಲವಾಗುವದು. ಅವರೊಡನೆ ನೆಲದ ಮೇಲೆ ತೊಡೆಗೆ ತೊಡೆ ಹಚ್ಚಿ ಕುಳಿತುಕೊಳ್ಳಬೇಕು. ಬೆನ್ನು ಚಪ್ಪರಿಸಬೇಕು. ಸುಖದುಃಖದ ಮಾತುಗಳನ್ನಾಡಬೇಕು. ಅವರ ಕುಟುಂಬದ ಜನರ ಬಗ್ಗೆ, ಪ್ರಾಪಂಚಿಕ ಅಡಚಣಿಗಳ ಬಗ್ಗೆ ಪ್ರೀತಿ ಸಹಾನುಭೂತಿಗಳಿಂದ ವಿಚಾರಿಸ-ಬೇಕು; ಸಲುಗೆಯ ಮಾತನಾಡಬೇಕು. ಅಶ್ಲೀಲವಾಗದ ವಿನೋದವನ್ನು ಆಗಾಗ್ಗೆ ಮಾತಿನಲ್ಲಿ ಬೆರೆಸಬೇಕು. ಹಿರಿಯರಿಗೆ ಸನ್ಮಾನದ ಬಹುವಚನವನ್ನು ಉಪಯೋಗಿಸಬೇಕು. 'ಎಲೆ', 'ಏನೊ' ಯೆನ್ನುವದನ್ನು ಪೂರ್ಣವಾಗಿ ತ್ಯಜಿಸಬೇಕು. ತನ್ನ ಮಾತು, ರೀತಿ, ನಡತೆಗಳಲ್ಲಿ ಅವರ ಶಿಕ್ಷಣದ ಬಗ್ಗೆ ಅಪಾರವಾದ ಆಸ್ಥೆಯನ್ನು ತೋರಿಸಬೇಕು; ಅವರಿಗೆ ತಾನೇ ಸ್ಫೂರ್ತಿಯ ಸೆಲೆಯಾಗಿ ಉಳಿಯಬೇಕು. ಇದೇ ಸಮವಾಯ ಪದ್ಧತಿಯ ತಿರುಳು, ಇಂಗಿತ, ಸಾರಸರ್ವಸ್ವ.

ಎಲ್ಲ ಮೂಲಾಕ್ಷರಗಳನ್ನು ಈ ಮೂರು ಪಟಗಳಲ್ಲಿ ಕಥೆಯಾಗಿ ಹೊಂದಿಸಿಕೊಂಡು ತರಲು ಸಾಧ್ಯವಾಗಿಲ್ಲ. ಈ ಪಟಗಳಲ್ಲಿ ಬಂದ ಅಕ್ಷರಗಳಲ್ಲಿ 'ಚ' ಹಾಗೂ 'ಳ' ಕೂಡ ಸ್ವಲ್ಪ ತೊಡಕಿನ ಅಕ್ಷರಗಳಾಗಿರುವವು. ಚಾವಡಿಯ ರೇಖಾಚಿತ್ರಕ್ಕೂ 'ಚ' ಅಕ್ಷರಕ್ಕೂ; ಇಕ್ಕಳದ ಆಕೃತಿಗೂ 'ಳ' ಅಕ್ಷರಕ್ಕೂ ತಕ್ಕಮಟ್ಟಿಗೆ ರೂಪಸಾದೃಶ್ಯವಿದೆ. ಆದರೆ ಉಳಿದ ವರ್ಣಗಳಲ್ಲಿರುವಂತೆ, ಇವೆರಡೂ ಆ ವಸ್ತುಗಳ ಹೆಸರಿನ ಪ್ರಾರಂಭದ ಅಕ್ಷರಗಳಲ್ಲ. ಇಂಥ ಸಂದರ್ಭ-ಗಳಲ್ಲಿ ಶಿಕ್ಷಕನು ತನ್ನ ಮಾತಿನ ಚಪಲತೆ ಚಾತುರ್ಯಗಳಿಂದ ವಯಸ್ಕರನ್ನು ಮರೆಮಾತಿಗೆ ಹಾಕಿ, ಚಾವಡಿಗೆ ಕೂಸು 'ಚ', ಇಕ್ಕಳಕ್ಕೆ 'ಳ'ಯೆಂದಲೇ ಹೇಳುತ್ತಿತ್ತೆಂದು ಕಥೆಯನ್ನು ಮುಂದೆ ಸಾಗಿಸಬೇಕು. ಈ ಪಟಗಳಲ್ಲಿ ಸುಮಾರು ಮೂವತ್ತು ಅಕ್ಷರಗಳು, 'ಗು'ಯೆಂಬ ಒಂದು ಕಾಗುಣಿತವೂ ಬರುವವು. ಉಳಿದವುಗಳನ್ನು ಸಾದಾರೀತಿಯಲ್ಲಿ ಸ್ಪಷ್ಟವಾಗಿ ಕಲಿಸಬಹುದು. ಬಿಡಿಯಾಗಿ ಚಿತ್ರಗಳ ಸಹಾಯದಿಂದಲೂ ಹೇಳಿಕೊಡಬಹುದು. ಇಲ್ಲಿಗೆ

ಬಾಗಿಲವನ್ನು ( ಕದ ) ತೋರಿಸಿ ಅದರ ಹೆಸರು ಬರೆಯಲು ಹೇಳಬೇಕು. ಅವರಿಗೆ 'ಕ' ಮಾತ್ರ ಗೊತ್ತಿದೆ. ಶಬ್ದಪೂರ್ತಿಯಾಗಬೇಕಾದರೆ, 'ದ' ಅಕ್ಷರವು ಬೇಕು. ಹೀಗೆ ಕಲಿಸಬೇಕಾದ ಅಕ್ಷರದ ಅವಶ್ಯಕತೆಯನ್ನು ಹುಟ್ಟಿಸಿ ಅದನ್ನು ಅವರು ತಿಳಿದುಕೊಳ್ಳುವಂತೆ ಮಾಡಬಹುದು. ಬಿಟ್ಟ ಅಕ್ಷರಗಳನ್ನು ತುಂಬುವ ಈ ಕ್ರೀಡಾಪದ್ಧತಿಯ ಸಾಧನವು ಒಳ್ಳೇ ಸಹಾಯಕವೂ ಯಶಸ್ವಿಯೂ ಆಗುವದೆಂದು ಅನುಭವದಿಂದ ಕಂಡುಬಂದಿದೆ. ಪಟಗಳಲ್ಲಿ ಬಾರದ ಉಳಿದ ಮೂಲಾಕ್ಷರಗಳನ್ನು ಕಥೆಗೆ ಹೇಗೆ ಹೊಂದಿಸಿಕೊಳ್ಳಬಹು-ದೆಂಬುದನ್ನು ಮುಂದಿನ ಪಾಠಗಳಲ್ಲಿ ತೋರಿಸಿದೆ.

ಈ ಪಟಗಳಲ್ಲಿ ಕೆಲವೊಂದು ಕಾಗುಣಿತಗಳನ್ನು ಕಲಿಸಲು ಸುಲಭವಾದ ಸಾಧನಗಳಿವೆ. 'ಗು' ಕಾಗುಣಿತದ ಗುಡಿಯ ಚಿತ್ರದಲ್ಲಿರುವ ಹಾದೀ ಹಾಗೂ ಮಾಲಗಂಬ ( ದೀಪದ ಕಂಬ )ವನ್ನು ಹಚ್ಚಿದರೆ 'ನು', 'ಸು' ಮೊದಲಾದ ಉಕಾರಾಂತ ಕಾಗುಣಿತಗಳಾಗುವವು. ಮೂರನೆಯ ಪಟದಲ್ಲಿ ಕಾಗುಣಿತಗಳ ಕೆಲವು ಚಿತ್ರರೂಪವಾದ ಚಿನ್ಹ ಕೊಟ್ಟಿವೆ. ಮೂಲ ವ್ಯಂಜನ ಗಳಿಗೆ ಕೊಂಬುತೆಗೆದು 'ಕಾಲು' ಜೋಡಿಸಿದರೆ ಆಕಾರಾಂತ ಕಾಗುಣಿತವೂ ಗಿಳಿಮೂಗು ಜೋಡಿಸಿದರೆ ಹ್ರಸ್ವ ಇಕಾರಾಂತ ಕಾಗುಣಿತವೂ ಕೈಕೊಟ್ಟರೆ ಐಕಾರಾಂತ ಕಾಗುಣಿತವೂ ಕೋಳಿಯ ಚಿಹ್ನವನ್ನು ಜೋಡಿಸಿದರೆ ಓಕಾರಾಂತ ಕಾ ಗುಣಿತವೂ ಸಾಧಿಸುವವು. ಉಳಿದವುಗಳನ್ನು ಸಾದಾರೀತಿ-ಯಲ್ಲಿ ಹೇಳಿಕೊಡಬಹುದು. ಮೂಲಾಕ್ಷರಗಳನ್ನೂ ಕಾಗುಣಿತಗಳೆಲ್ಲವನ್ನೂ ಕಲಿತಮೇಲೆ ವಯಸ್ಕರಲ್ಲಿ ಸಾಕಷ್ಟು ಪ್ರಗತಿಯಾಗಿರುವದು. ಕಲಿಯಬಲ್ಲೆ-ವೆಂಬ ನಂಬಿಕೆಯೂ, ಹೆಚ್ಚಿಗೆ ಕಲಿಯಬೇಕೆಂಬ ಆಸ್ಥೆಯೂ ಅವರಲ್ಲಿ ಉಂಟಾಗಿರುವದು. ಇಂಥ ಸಂದರ್ಭದಲ್ಲಿ ಒತ್ತಕ್ಷರಗಳ ಅವಶ್ಯಕತೆಯನ್ನು ಅವರಿಗೆ ಮನಗಾಣಿಸಿ ಸಾದಾರೀತಿಯಲ್ಲಿ ಅವುಗಳನ್ನು ಕಲಿಸಿಬಿಡಬೇಕು. ಈ ಪದ್ಧತಿಯಿಂದ ಮೂಲಾಕ್ಷರಗಳನ್ನೂ, ಕಾಗುಣಿತಗಳನ್ನೂ ಹಾಗೂ ಒತ್ತಕ್ಷರಗಳನ್ನೂ ಒಂದು ಗುಂಪಿಗೆ ಕಲಿಸಲು ಎರಡು ವಾರಗಳು ಬೇಕಾಗ-ಬಹುದು. ಇವುಗಳನ್ನು ಕಲಿಸುವಾಗ್ಗೆ ವೇಗ ಹಾಗೂ ಪ್ರಗತಿಗಳನ್ನು ಸಾಧಿಸಬೇಕೆನ್ನುವ ಹಂಬಲದಲ್ಲಿ ಸಾಕಷ್ಟು ದೃಢೀಕರಣವಾಗಿರುವದಿಲ್ಲ. ವೇಗ ಹಾಗೂ ಪ್ರಗತಿಗಳಿಲ್ಲದ ಪದ್ಧತಿಯು ವಯಸ್ಕರ ಮನೋಭೂಮಿಕೆಗೆ ಒಗ್ಗುವದಿಲ್ಲ. ವಯಸ್ಕರ ಆಸ್ಥೆ-ಅವಧಾನಗಳನ್ನು ಬಿಗಿಹಿಡಿಯುವದಿಲ್ಲ.

ಇದಕ್ಕಾಗಿ ಮುಂದೆರಡು ವಾರಗಳಲ್ಲಿ ವಯಸ್ಕರಿಗೆ ಅಕ್ಷರಗಳ ಪರಿಚಯದಲ್ಲಿ, ಬಳಿಕೆಯಲ್ಲಿ, ಬರಹದಲ್ಲಿ ಸಾಕಷ್ಟು ರೂಢಿಯನ್ನು ಒದಗಿಸಿಕೊಡಬೇಕು. ಇದಕ್ಕಾಗಿ ವಯಸ್ಕರಿಗೆ ಆಸ್ಥೆಯುಳ್ಳ ವಿಷಯಗಳನ್ನು ಸರಳವಾದ, ಸಂಕ್ಷೇಪ-ವಾದ ಶೈಲಿಯಲ್ಲಿ ಬರೆದುಕೊಡಬೇಕು. ಇಲ್ಲವೆ ಆ ಬಗೆಯ ಪುಸ್ತಿಕೆಗಳು ಲಭ್ಯವಿದ್ದರೆ ಅವುಗಳನ್ನು ಪೂರೈಸಬೇಕು. ಸಂಸಾರದ ಪತ್ರಗಳನ್ನೂ ಸುಲಭವಾದ ಅರ್ಜಿ-ವರದಿಗಳ ಮಾದರಿಯನ್ನೂ ಅವರಿಗೆ ತೋರಿಸಿಕೊಡಬೇಕು. ಒಟ್ಟಿನಲ್ಲಿ, ಸುಲಭವಾಗಿ, ಶೀಘ್ರವಾಗಿ ಸಂಪಾದಿಸಿದ ಅಕ್ಷರಜ್ಞಾನದ ದೃಢೀ-ಕರಣವು ಸಮವಾಯ ಪದ್ಧತಿಯಲ್ಲಿ ಅತ್ಯಂತ ಮಹತ್ವದ, ಜೀವಾಳದ ಭಾಗ-ವಾಗಿರುವದೆಂಬುದನ್ನೆಂದಿಗೂ ಮರೆಯಕೂಡದು. ಏಕೆಂದರೆ, ವಯಸ್ಕರು ಕಲಿಯುವದೂ ತೀವ್ರ, ಮರೆಯುವದೂ ತೀವ್ರ. ಇದನ್ನು ತಪ್ಪಿಸಲು ಈ ದೃಢೀಕರಣದ ರೂಢಿಯೇ ಒಂದು ಉಪಾಯವಾಗಿದೆ.

ಈ ಸಮವಾಯ ಪದ್ಧತಿಯಲ್ಲಿ ಅಕ್ಷರಗಳು ಚಿತ್ರಗಳಿಂದ ಬೆಳೆದು ಬರುವವು. ಚಿತ್ರಲಿಪಿಯು ಪ್ರಪಂಚದಲ್ಲಿ ನೂತನವಾದುದಲ್ಲ. ಪ್ರಾಚೀನ ಇಜಿಪ್ತದ ಮತ್ತು ಇಂದಿಗೂ ಚೀನದ ಲಿಪಿಯು ಒಂದು ಬಗೆಯ ಚಿತ್ರಲಿಪಿಯೇ ಆಗಿರುವದು. ಚಿತ್ರಗಳಿಂದಲೇ ಅಕ್ಷರಗಳನ್ನು ಬೆಳೆಸಿಕೊಂಡು ಬರುವದು ಸ್ವಾಭಾವಿಕವಾದುದು, ಶಾಸ್ತ್ರೀಯವಾದುದು ಎಂದು ತಿಳಿದವರು ಹೇಳುವ-ದುಂಟು. ಗಾಂಧೀಜಿಯವರ ಮೂಲಶಿಕ್ಷಣದಲ್ಲಿ ಅಕ್ಷರಗಳನ್ನು ಮೂಲೋ-ದ್ಯೋಗಕ್ಕೆ ಸಂಬಂಧಿಸಿದ ಚಿತ್ರಗಳಿಂದಲೇ, ಚಿತ್ರಗಳ ಮುಖಾಂತರವಾಗಿಯೇ, ಕಲಿಸಬೇಕೆಂದು ಹೇಳಲಾಗಿದೆ. ಸಮವಾಯ ಪದ್ಧತಿಯಲ್ಲಿ ಅಕ್ಷರಗಳ ಚಿತ್ರದ ಹೋಲಿಕೆಯನ್ನು ತಪ್ಪಿಸಿ ಅವುಗಳ ನಿತ್ಯದ ಬಳಕೆಯ ಸ್ವರೂಪಕ್ಕೆ ಕ್ರಮೇಣ ತೆಗೆದುಕೊಂಡು ಬರಬೇಕು.

ಸಮವಾಯ ಪದ್ಧತಿಯಲ್ಲಿ ಇನ್ನೊಂದು ತೊಡಕಿನ ವೈಶಿಷ್ಟ್ಯವಿದೆ. ಅದೆಂದರೆ ಬಾಲಕರ ಭೂಮಿಕೆಯನ್ನು ಬಳಸಿಕೊಳ್ಳುವದು. ಶಬ್ದಗಳ ಪ್ರಾರಂಭದ ಅಕ್ಷರವನ್ನು ಮಾತ್ರ ತೆಗೆದುಕೊಳ್ಳುವದಕ್ಕೆ-ಇನ್ನೂ ಅದೇ ಮಾತನಾಡಲು ಪ್ರಾರಂಭಿಸಿದ ಮಗುವು ' ಗುಡಿ 'ಗೆ ಏನೆಂದು ಹೇಳುವದು ? ' ಗು ' ಯೆಂದು. ಅಕ್ಷರಸಾದೃಶ್ಯವನ್ನು ಸಾಧಿಸುವದಕ್ಕಾಗಿ ಮಗುವು ಗುಡಿಯ ಚಿತ್ರವನ್ನು ತಾನು ಹೇಗೆ ತೆಗೆಯಬಹುದೆಂದು ತೋರಿಸುವದು. ಕೆಲವರು ಈ ಮಗುವಿನ ಭೂಮಿಕೆಯನ್ನು ಬಿಟ್ಟುಕೊಟ್ಟು, ನೇರವಾಗಿ ತಾವೇ

ಹೇಳುವದುಂಟು. 'ಗುಡಿಗೆ ನಾವು 'ಗು' ಯೆಂದು ಇನ್ನು ಮುಂದೆ ಕರೆಯೋಣ. ಗುಡಿಯ ಚಿತ್ರವನ್ನು ನಾವು ಇದಕ್ಕೂ ಸರಳವಾಗಿ ಈ ರೀತಿಯಲ್ಲಿ ತೆಗೆಯೋಣ'. ಹೀಗೆ ಸ್ಪಷ್ಟವಾಗಿ ಹೇಳಿಬಿಡುವದೂ ಒಂದು ವಿಧಾನ. ಮಗುವಿನ ಪಾತ್ರವನ್ನು ನಿರ್ಮಿಸುವಲ್ಲಿ, ಬಾಲಭಾಷೆಯೆಂದು ಒಂದೇ ಅಕ್ಷರವನ್ನು ಹೊರಡಿಸುವಲ್ಲಿ ಕೃತ್ರಿಮತೆ, ದೂರದ ಸಂಬಂಧ ಕಂಡು-ಬಂದರೂ ಈ ಪ್ರಯೋಗವು ಅನುಭವದಿಂದ ಯಶಸ್ವಿಯಾಗಿರುವದು. ಪರಿಣಾಮದ ದೃಷ್ಟಿಯಿಂದ ಹೀಗೆ ಮಾಡುವದು ಅಗತ್ಯವೆನಿಸುವದು. ವಯಸ್ಕರ ಮನಸ್ಸನ್ನು ಮೊದಲೇ ಹದಗೊಳಿಸಿದಾಗ್ಗೆ, ಈ ಬಗೆಯ ಲೋಪದೋಷಗಳು ಕಾಣದೆಯೇ ಹೋಗುವವು.

ಕೊನೆಯ ಮಾತು. ವಯಸ್ಕರಿಗೆ ಈ ಪದ್ಧತಿಯಿಂದ ಸ್ವಂತವಾಗಿ ಕಲಿಸದವರು, ಇಲ್ಲವೆ ಕಲಿಸಲಿಕ್ಕಾಗದವರು ಹಾಗೂ ಕಲಿಸುವದನ್ನು ಕಣ್ಣಾರೆ ನೋಡದವರು ಇದರ ಉಪಯುಕ್ತತೆಯನ್ನು ಅಲ್ಲಗಳೆಯಬಹುದು. ಆದರೆ ಈ ಪದ್ಧತಿಗೆ ಇಂದಿನ ಶಿಕ್ಷಣ ಮಾನಸಶಾಸ್ತ್ರದ ಮೂಲತತ್ವಗಳ ಬೆಂಬಲವಿದೆ. ಪ್ರೇಮದ ವರ್ತನೆಯಿಂದ ವಯಸ್ಕರ ಮನಸ್ಸನ್ನು ಎಳೆದುಕೊಳ್ಳುವದು; ಕಥೆಯಿಂದ ಅವರ ಕುತೂಹಲವನ್ನೂ ಆಸ್ಥೆಯನ್ನೂ ಕೆರಳಿಸುವದು; ಸಂಭಾಷಣೆಯಿಂದ ಅವರ ಸಹಕಾರವನ್ನು ಗಳಿಸುವದು; ಇವುಗಳಲ್ಲದೆ, ಕಲಿಯುವಾಗ್ಗೆ ವಯಸ್ಕರು ಚಿತ್ರಗಳನ್ನು ನೋಡುವರು; ಹೇಳಿದುದನ್ನು ಕೇಳುವರು; ಕೇಳಿದುದನ್ನು ಅನೇಕಸಲ ಅಂದು ತೋರಿಸುವರು; ಬರೆದು ತೋರಿಸುವರು. ಇವೆಲ್ಲ ಕೃತಿಗಳಲ್ಲಿ ಅವರ ಕಣ್ಣು, ಕಿವಿ, ನಾಲಿಗೆ, ಕೈಗಳ ಆದಷ್ಟು ಹೆಚ್ಚು ಇಂದ್ರಿಗಳ ಸಹಾಯವು, ಸಹಕಾರವು ಕಲಿಯುವದರಲ್ಲಿ ನಮಗೆ ದೊರೆಯುವದು. ಕಲಿಯುವದರಲ್ಲಿ ಈ ಸಂಗತಿಯಾದರೂ ಮಹತ್ವದ ಮಾತಾಗಿದೆ. ಈ ದೃಷ್ಟಿಯಿಂದ ನೋಡಿದರೆ, ಸಮವಾಯ ಪದ್ಧತಿಯು ಆಧುನಿಕ ಶೈಕ್ಷಣಿಕ ಮಾನಸಶಾಸ್ತ್ರದ ಆದರ್ಶವಾದ, ಆದರಣೀಯವಾದ ಅನೇಕ ತತ್ವಗಳನ್ನು ಅನುಸರಿಸುವದೆಂಬುದು ಕಂಡುಬರುವಂತಿದೆ. ಹಾಗೂ 'ಶೀಘ್ರಸಾಕ್ಷರತೆ'ಯನ್ನು ತಂದು ಕೊಡಲು ಪರಿಣಾಮಕಾರಿಯಾದ ಸಾಧನ-ವಾಗಿದೆ. ಅನುಭವವೇ ಈ ಮಾತಿಗೆ ಹಿರಿದಾದ ಪ್ರಮಾಣ.

# ಪಾಠ ಮೊದಲಿನದು

## * ( ಪಟ ೧ )

[ ಶಿಕ್ಷಕನು ವಯಸ್ಕರೊಡನೆ ಹರಟೆಹೊಡೆಯುವ ರೀತಿಯಲ್ಲಿ ಸಮಾನತೆಯಿಂದ ಶಕ್ಯವಿದ್ದಷ್ಟು ಸಾದಾ ಉಡುಪನ್ನು ಧರಿಸಿ ಅವರಲ್ಲಿ ಒಬ್ಬನಾಗಿ ಕುಳಿತುಕೊಳ್ಳು-ವದು. ಯಾವ ಸಂಕೋಚವಿಲ್ಲದೆ, 'ನ್ಯೆಚಳಿ ಬಿಟ್ಟು' ಕುಳಿತುಕೊಳ್ಳಲು ಅವರಿಗೆ ಹೇಳುವದು. ಕರಿಹಲಿಗೆ, ಖಡುವು, ಪಟದ ಮುದ್ರಿತ ಪ್ರತಿಗಳು ಇವುಗಳನ್ನು ಬಳಿಯಲ್ಲಿ ಇಟ್ಟುಕೊಂಡಿರಬೇಕು. ]

**ನಿರೂಪಣೆ:** 'ಓಹೊ! ಬರ್ರಿ, ಬರ್ರಿ. ದಣಿದು ಬಂದಿರಲ್ಲ! ಈವೊತ್ತೇನು ದಗದ ಮಾಡಿದಿರಿ? ಈಗ ಬಿಟ್ಟರೇನು? ಮನೀಗೆ ಹೋಗಿಬಂದಿರಾ? ನೀರು ತರಬೇಕಲ್ಲ ದೂರಿಂದ? ಒಳ್ಳೇದು ನಾನೂ ದಣಿದೀನಿ–ನೀವೂ ದಣಿದೀರಿ. ಅರ್ಧಾ ಗಂಟೆ ಕೂತು ಹರಟೆ ಹೊಡೆಯೋಣ. ಮನ್ಯಾಗ ಮಕ್ಕಳಿಗೆ ಕಥೀ ಹೇಳತೀರಲ್ಲ. ನಾನೂ ಒಂದು ಕಥೀ ಹೇಳತೀನಿ. ಕಥೀ ಅಂದರ ಕಥೀ— ನಗಚ್ಯಾಟಕೀ. ನಮ್ಮೂರು . . . . . ಕೇಳೀರೇನು ಹೆಸರು? ನಮ್ಮೂರಾಗ ಈಶ್ವರನ ಗುಡಿ ಅದ. ದೊಡ್ಡ ಜಾತ್ರಿ ಆಗತದ. ದನ ಬಹಳ ಕೂಡತಾವ. ಒಂದು ದಿನ ಮೋಜು ಆತು. ಅದನ್ನ ಹೇಳತೀನಿ. ನಮ್ಮೂರ ಗುಡೀನೂ ನಿಮ್ಮೂರ ಗುಡೀಯಂತೆ. ಗುಡೀ ಮುಂದ ಹಾದೀ–ಮಾಲಗಂಬ. ಗುಡ್ಯಾಗ ಕಾಲು ತೊಳಕೊಂಡು ಹೋಗಬೇಕು. ದೊಡ್ಡೂರ ಗುಡಿ. ಭಾವಿ ಇಲ್ಲ—

---

*ಈ ಪಟಗಳನ್ನು ಹೇಗೆ ಉಪಯೋಗಿಸಬೇಕೆಂಬುದು ನೂತನ ಶಿಕ್ಷಕರಿಗೆ ವಿದಿತವಾಗಬೇಕೆನ್ನುವ ಉದ್ದೇಶದಿಂದ ವರ್ಗದಲ್ಲಿ ಹೇಳುವಂತೆಯೇ ಯಥಾವತ್ತಾಗಿ ಇಲ್ಲಿ ನಿರೂಪಿಸಿದೆ. ಆದರೆ ಈ ಕಥೆಯೆಂಬುದು ಕೇವಲ ಒಂದು ಕೈಗೋಲು. ಈ ನಿರ್ಜೀವವಾದ ಅಸ್ಥಿಪಂಜರದಲ್ಲಿ ಶಿಕ್ಷಕನು ತನ್ನ ಪ್ರತಿಭೆಯಿಂದ ಪ್ರಾಣಪ್ರತಿಷ್ಠಾಪನೆಯನ್ನು ಮಾಡಬೇಕು. ಸಾಕ್ಷರತೆಯನ್ನು ತಂದುಕೊಡಲು, ಉಪಯುಕ್ತವಾದ ವಿಷಯಜ್ಞಾನವನ್ನು ಮಾಡಿಕೊಡಲು, ಕಥೆಯು ಶಿಕ್ಷಕನ ಜಾಣ್ಮೆಯಿಂದ ಸಜೀವವಾದ ಸಾಧನವಾಗುವದು. ಇದನ್ನು ಸಾಧಿಸಲು ಶಿಕ್ಷಕನು ತನಗೆ ಬೇಕಾದ ಸ್ವಾತಂತ್ರ್ಯವನ್ನು ವಹಿಸಬಹುದು. ಇಲ್ಲಿ ಕೊಟ್ಟ ನಿರೂಪಣೆ ಕೇವಲ ರೀತಿಯ ನಿದರ್ಶನಕ್ಕಾಗಿ. ಇದರಲ್ಲಿ ಇಷ್ಟವಾದ ಹೆಚ್ಚು ಕಡಿಮೆ ಮಾಡಿಕೊಳ್ಳಬೇಕು.

ಹೊಳಿ ಇಲ್ಲ. ಸಮೀಪದಾಗ ನಳ ಅದ. ದೇವಸ್ಥಾನದ ನಳ—ಯಾವಾಗಲೂ ಚಾಲೂ ಇರತದ. ನಳ ನೋಡೀರಲ್ಲ? 'ಸ್ಟೇಶನದಾಗ.' ಹೌದು. ನೀರಿನ ಅಡ್ಡ ಪಾಯಿಪಗೆ ಒಂದು ತೋಟೀ ಹಚ್ಚಿರತಾರ. ಆದರ–ಗುಡೀ ನಳಾ ಹಳೇದು. ಪಾಯಿಪು ಒಡೆದದ. ತೂತು ಬಿದ್ದದ. ತೂತಿನಾಗ ನೀರು ಪುಟೀತದ. 'ಸ' ಅಂತ ಸಪ್ಪಳ ಮಾಡತದ. ಗುಡ್ಯಾಗ ಗಂಟೀ ಕಟ್ಯಾರ. ಗಂಟೀ ಬಾರಿಸಬೇಕು—ನಾವು ಬಂದದ್ದು ತೀಳೀಬೇಕಲ್ಲ ದೇವರಿಗೆ. ಗಂಟೆ ಹಳೇದಾಗೇದ. ನಾಲಿಗೆ ಬಿದ್ದುಹೋಗೇದ. ಗುಡೀ ಒಳಗ ದೊಡ್ಡ ಈಶ್ವರ ಲಿಂಗ ಅದ. ಲಿಂಗಕ್ಕೆ ವಿಭೂತಿ-ಊದಬತ್ತಿ–ಹಚ್ಚಿರತಾರ. ಜಲಾರಿ ಅದ. ಜಲಾರಿಯಿಂದ ನೀರು ಬೀಳತಾವೆ. ದೇವರ ಮುಂದ ಪಣತಿ. ದೀಪ ಹಚ್ಚಿರತಾರ. ಹುಣ್ಣಿವಿ ದಿನಾ. ಭಕ್ತರು ಜೋಡು ಹಣ್ಣು ದೇವರಿಗೆ ಎಡೀ ಮಾಡಿದ್ದರು. ದೇವರಂತೂ ತಿನ್ನಾವಾ ಅಲ್ಲಾ. ಎಡಿ ಯಾರ ಪಾಲಿನದು? 'ಪೂಜಾರಪ್ಪನದ'? ಹೌದು. ಆದರ ಪೂಜಾರಪ್ಪಗ ಆಗದವರು ಗುಡ್ಯಾಗ ಇರತಾರ. ನೋಡಿರಲ್ಲ? ನಾಲ್ಕು ಕಾಲಿನವರು. ನೆನೆಗಡಲಿ, ಕೊಬ್ಬರಿ, ತೆಂಗಿನಕಾಯಿ ತಿಂದು ಕೊಬ್ಬಿರತಾರ. 'ಇಲೀನ'? ಹೌದು. ಇಲಿ, ಇಲಿ, ಇಲೆಪ್ಪನವರು. ಒಂದು ಇಲಿ ಈ ಜೋಡು ಹಣ್ಣು ತಿನ್ನಾಕ ಬಂತು. ಗುಡಿ ಪೂಜಾರಿ—ಆತನ ಹೆಸರು 'ಜಕ್ಕಪ್ಪ'. ಜಕ್ಕಪ್ಪ ಹ್ಯಾಂಗ ಇದ್ದಾನ? ಯಾಕ? ಹಣ್ಣು ಗಿಣ್ಣು ಕೊಡತೀರೇನು? ಸಮಾಧಾನ ಹಿಡೀರಿ. ಜಕ್ಕಪ್ಪನ ಚಿತ್ರಾನ ತೆಗೆದು ತೋರಿಸತೀನಿ. ಇಲಿ ಹಣ್ಣು ತಿನ್ನೋದು ನೋಡಿದ. ಜಕ್ಕಪ್ಪಗ ಹೊಟ್ಟೀಕಿಚ್ಚು. ಎದ್ದು ಹೋಗಿ ಹೊಡೀಲಾರ—ಮೈಗಳ್ಳತನ. ಕೂತಲ್ಲೆ ಕೈಯೆತ್ತಿ 'ಓ' ಯೆಂದು ಬಾಯಿ ಮಾಡಿದ. ಗುಡ್ಯಾಗಿನ ಇಲಿ. ಇದಕೆಲ್ಲಾ ಬೆದರತಾವ? ಬಿಸಿಲ ಹೊತ್ತು. ಜಕ್ಕಪ್ಪಗೂ ತೂಕಡಿಕೀ. ಒಂದು ಹಳ್ಳು ತೊಗೊಂಡು ಕೂತಲ್ಲೇ ಒಗೆದ. ಗುರಿ ತಪ್ಪಿತು. ಇಲಿಗೆ ಬಡೀಲಿಲ್ಲ. ದೇವರ ಮುಂದಿನ ಪಣತಿಗೆ ಬಡೀತು. ಸಿಟ್ಟಲೇ ಒಗೆದ ಹಳ್ಳು. ಕೇಳೀತ? ಪಣತಿ 'ಫಟ್' ಅಂತ ಒಡೆದುಬಿಟ್ಟಿತು.

ಆಯಿತಪ್ಪ ಜಕ್ಕಪ್ಪನ ಫಜೀತಿ! ನೀವು ಜಕ್ಕಪ್ಪನ್ನ ನೋಡಬೇಕಂತಿದ್ದ-ರಲ್ಲ? ಜಕ್ಕಪ್ಪ ಒಬ್ಬನೇ ಯಾಕ? ಗುಡಿ, ನಳ, ಈಶ್ವರಲಿಂಗ ಎಲ್ಲಾನೂ ಈ ಫಳಾದ ಮೇಲೆ ತೆಗೆದು ತೋರಿಸತೀನಿ. ಮತ್ತು ನೀವೂ ತಗದೀರಂತ ನಿಮಗ ಬಂದಂತೆ ಮುಂದ.

**ಸೂಚನೆ ೧:** ಶಿಕ್ಷಕನು ಚಿತ್ರ ತೆಗೆಯುವಾಗ್ಗೆ ವಯಸ್ಕರಿಗೆ ಪ್ರಶ್ನೆ ಕೇಳುತ್ತ ಹೋಗಬೇಕು. ಒಮ್ಮೊಮ್ಮೆ ಮರೆತಂತೆ ನಟಿಸಿ—ಅಂ! ಪೂಜಾರಪ್ಪನ ಹೆಸರೇನು? ಜಕ್ಕಪ್ಪ. ಹೌದು. ಹೀಗೆ ವಯಸ್ಕರನ್ನು ಮಾತಿನಲ್ಲಿ ತೊಡಗಿಸಿ ಅವರ ಮನಸ್ಸನ್ನು ಅತ್ತಿತ್ತ ಹರಿಯಗೊಡದೆ, ಅವರ ಲಕ್ಷ್ಯವೆಲ್ಲ ಚಿತ್ರದ ಕಡೆಗೆ, ತನ್ನ ಮಾತಿನ ಕಡೆಗೆ ಯಾವಾಗಲೂ ಉಳಿಯುವಂತೆ ಯತ್ನಿಸಬೇಕು.

ಒಳ್ಳೇದು. ನೋಡಿದರಲ್ಲ ನಿಮ್ಮ ಜಕ್ಕಪ್ಪನ್ನ, ನಳಾನ್ನ, ಪಣತೀನ. ಇದೇನು? 'ನಳ'. ಇದು? ಇಲಿ. ಇವರು? 'ಜಕ್ಕಪ್ಪ? . . . (ಇತ್ಯಾದಿ).

ನನ್ನ ಮಗ ಈ ಕಥೀ ಕೇಳಿತು. ನಾ ತೆಗೆದ ಚಿತ್ರಾನೂ ನೋಡಿತು. ಸಣ್ಣ ಕೂಸು. ನಾ ಚಿತ್ರ ತೆಗಿದದ್ದು ನೋಡಿ ತಾನೂ ಅದರಂತೆ ತಗೀತು. ಹ್ಯಾಂಗ ಬಂದಹಾಂಗ. ಸಣ್ಣ ಮಗ ಹ್ಯಾಂಗ ಚಿತ್ರ ತಗೀತು-ತೋರಿಸಲಾ? ನಿಮಗೂ ಬರತದಲ್ಲ ಹೀಂಗ ಚಿತ್ರಾ ಬರೀಲಿಕ್ಕೆ? ಖಾತ್ರೀನೇ ಬರತದ.

**ಸೂಚನೆ ೨:** ಇಲ್ಲಿ ಶಿಕ್ಷಕನು ಮೊದಲಿನ ಚಿತ್ರಗಳನ್ನು ಅಳಿಸಿ ಅಕ್ಷರಗಳನ್ನು ಹೋಲುವ ರೀತಿಯಲ್ಲಿ ಸಣ್ಣ ಮಗು ಚಿತ್ರ ತೆಗೆದಂತೆ ತೆಗೆಯುತ್ತ ಹೋಗಬೇಕು. ಹೀಗೆ ತೆಗೆಯುವಾಗ್ಗೆ ವರ್ಣಸಂಕೇತಗಳಾಗಿರುವ ಈ ಚಿತ್ರರೂಪಿಯಾದ ಅಕ್ಷರಗಳು ಮಹತ್ವದ ಮೆಟ್ಟಲುಗಳು ಎಂಬುದನ್ನು ನೆನಪಿನಲ್ಲಿಟ್ಟು ಈ ಸ್ವರ-ಸಂಕೇತಗಳು ವಯಸ್ಕರ ಮನಸ್ಸಿನಲ್ಲಿ ಸ್ಥಿರವಾಗಿ, ಸ್ಪಷ್ಟವಾಗಿ, ಶುದ್ಧವಾಗಿ ಮೂಡುವಂತೆ ಪ್ರಯತ್ನಿಸಬೇಕು.

ಇವು ಸಣ್ಣ ಕೂಸು ತೆಗೆದ ಚಿತ್ರ. ನೋಡಿದರಲ್ಲ. ಇದೇನು? 'ಗಂಟೆ' ಇವರು? 'ಜಕ್ಕಪ್ಪ' (ಇತ್ಯಾದಿ). ಸಣ್ಣ ಕೂಸು ಅಂತೆ ಹೇಳಿದೆನಲ್ಲ! ಇನ್ನೂ ಅದಕ್ಕ ಮಾತು ಬರೋದಿಲ್ಲ. ಈಗ ಒಂದೊಂದು ಒಂದೊಂದು ಮಾತನಾಡತದ. ಸಣ್ಣ ಕೂಸು ಊರಿಗೆ ಹೋಗೋದಕ್ಕೆ ಏನಂತಾರ ಗೊತ್ತ? 'ಬೂ' ಹೋಗೋದು ಅಂತಾರ. ಹಾಂಗ ಗುಡಿಗೆ— 'ಗು' ಅಂತಾರ. 'ನಳ'ಕ್ಕೆ 'ನ' ಅಂತಾರ. ಜಕ್ಕಪ್ಪಗ 'ಜ' ಅಂತಾರ.

**ಸೂಚನೆ ೩:** ಹೀಗೆ ಚಿತ್ರಗಳನ್ನು ವರ್ಣಲಿಪಿಗಳನ್ನು ತೋರಿಸಿ ಅವುಗಳೊಡನೆ ಸ್ವರಸಂಯೋಜನೆಯನ್ನು ಸಾಧಿಸಬೇಕು. ಆಕೃತಿಗಳನ್ನು ತೋರಿಸಿ... ಇದು 'ಗು', ಇದು 'ನ', ಇದು 'ಜ' ಎಂದು ಹೇಳಿ, ಹೇಳಿಸಿಕೊಂಡು, ಅದಲುಬದಲು ಮಾಡಿ ಮತ್ತೆ ಮತ್ತೆ ಹೇಳಿಸಿಕೊಂಡು ಅಕ್ಷರ ಹಾಗೂ ಅವುಗಳ ಉಚ್ಚಾರ ಇವುಗಳನ್ನು ಸ್ಥಿರವಾಗಿ ಹೊಂದಿಸಿಕೊಳ್ಳಬೇಕು.

ಹಾಗಾದರೆ ಇದಕ್ಕೆ ಸಣ್ಣ ಕೂಸು ಏನನ್ನುವದು? 'ಗು' ಇದಕ್ಕೆ 'ಹ' ಹೌದು. (ಇತ್ಯಾದಿ) ಇದಕ್ಕೇನೆ 'ಗು' ಅಕ್ಷರವೆನ್ನುವರು. ಇದಕ್ಕೆ 'ಹ' ಅಕ್ಷರವೆನ್ನುವರು. ಇದಕ್ಕೆ 'ಪ' ಅಕ್ಷರವೆನ್ನುವರು. (ಇತ್ಯಾದಿ).

ಇಕೊ, ಇವನ್ನೆಲ್ಲ ಅಳಿಸಿಬಿಡತೇನೆ. ಒಂದೊಂದಾಗಿ, ಬಿಡಿಬಿಡಿಯಾಗಿ ಬರೀತೇನೆ. ಈಗ ಹೇಳಿರಿ. ಇದೇನು? (ಹೀಗೆ ಎಲ್ಲ ಅಕ್ಷರಗಳ ಉಜಳಣಿಯನ್ನು ತೆಗೆದುಕೊಳ್ಳುವದು. ಆಮೇಲೆ ಅಕ್ಷರಗಳ ಜೋಡಣೆ-ಶಬ್ದರಚನೆ)

ಒಳ್ಳೇದು ಇದೇನು? 'ಜ'. ಇದು? 'ನ'. 'ಜ-ನ'. 'ಜ-ನ'– 'ಜನ' ಕೂಡಿಸಿಹೇಳಿರಿ. 'ಜ ನ'. ಹೌದು. ಜನ. ಇಷ್ಟು ಜನ ನೀವು ಇಲ್ಲಿ ಕೂಡೀರಲ್ಲ? ನೀವೇನು ಮಾಡತೀರಿ? ನೀವೇ ಹೇಳಿರಂತ. ಇದೇನು? 'ನ', ಇದು 'ಗು'. ನ–ಗು, ನ–ಗು. ಕೂಡಿಸಿಹೇಳಿರಿ. 'ನಗು'. ಹೌದು. 'ನಗು'. ನೀವೇನು ಮಾಡತೀರಿ? 'ನಗು'-ನಗತೀರಲ್ಲ. ನಾಲ್ಕು ಅಕ್ಷರ ಓದಾಕ ಬರತದಂತ ನಗತೀರಲ್ಲ! ನಾಲ್ಕು ಯಾಕ–ನೂರು ಅಕ್ಷರ ಕಲಿತೀರಂತ. ಓದೀರಂತ. ಬರದೀರಂತ. ಈ ಪಟ ತಕ್ಕೊಳ್ಳಿರಿ. ಪಾವಡದ ಚುಂಗಿನಾಗ ಮಡಚಿ ಕಟ್ಟರಿ. ಮನ್ಯಾಗ ಖಾಲೀ ಕೂತಿರತೀರಿ. ದಗದಕ್ಕ ಹೋದಾಗ ನೆರಳಾಗ ಕೂತಿರತೀರಿ. ಈ ಪಟಾ ಹೊರಗ ತೆಗೀರಿ. ಮಣ್ಣು–ಉಸುಕು ಸಮಾಮಾಡರಿ. ಕಡ್ಡೀಚೂರು ತಗೊಂಡು ಬರೀರಿ— 'ನ', 'ಗ', 'ಜ' ಅಂತಾ. ಇಂದು ಕಲಿತದ್ದೆಲ್ಲಾ ಮನಸ್ಸಿನಾಗ ಉಳೀತದ. ನಾಳೆ ಮತ್ತೊಂದು ಕಥೀ ಹೇಳತೀನಿ. ಗೌಡರ ಕಥೀ. ಗೌಡರ ಫಜೀತಿ ಮಾಡಿ ಬಿಡೋಣಂತ. ನಾಳಿಗೆ ಬರತೀರಲ್ಲ ಮತ್ತ?

ಇನ್ನೊಂದು ಗಳಿಗೆ ಕೂಡತೀರೇನು?–ಈ ಪಾಟಿ ಖಡುವು ತೊಗೊಳ್ಳಿರಿ. ಬರೀರಿ ನೋಡೋಣ. 'ಜ–ಗ' ಹೌದು. 'ಜಗ.' 'ಗ–ಜ–ಗ' ಹೌದು 'ಗಜಗ'. 'ಗ–ಸ—ಗ–ಸ'. ಹೌದು. ನೀವೂ 'ಗಸ ಗಸ' ಕಲೀಬೇಕು.

**ಸೂಚನೆ ೪:** ಹೀಗೆ ಬಿಡಿ ಅಕ್ಷರಗಳನ್ನೂ ಇಡೀ ಶಬ್ದಗಳನ್ನೂ ಪ್ರತಿಯೊಬ್ಬ ವಯಸ್ಕರಿಂದ ಕೆಲವುಸಾರೆ ಶಿಕ್ಷಕರು ಬರೆಯಿಸಬೇಕು. ಯಾವುದೊಂದು ಅಕ್ಷರವು ನೆನಪಾಗದಿದ್ದರೆ ಕಥೆಯ ಸಂದರ್ಭವನ್ನು ಹೇಳಿ ಅದನ್ನು ನೆನಪು ಮಾಡಿಕೊಡಬೇಕು. ಉದಾ: 'ಪ' ನೆನಪಾಗದಿದ್ದರೆ–'ದೇವರ ಮುಂದೆ ದೀಪಾ ಯಾತರಾಗ ಹಚ್ಚಿದ್ದರು? ಅದಕ್ಕೆ ಕೂಸು ಏನನತಿತ್ತು ?–'—ಹೀಗೆ.

ಒಳ್ಳೇದು. ಹೋಗಿ ಬರ್ರಿ. ನಮಸ್ಕಾರ! ನಮಸ್ಕಾರ!!

# ಪಾಠ ಎರಡನೇದು

ಇಂದು ಮತ್ತೊಂದು ಕಥೀ ಹೇಳತೀನಿ ನಿಮಗ. ಅದೂ ಮಜೇದಾರ ಕಥೀ. ನಮ್ಮೂರ ಗೌಡರದು. ಗೌಡರ ಮನ್ಯಾಗ ಆಳೂ ಹೋಳು. ಎಲ್ಲಾ ದಗದ ಮಾಡೋರು. ಗೌಡರಿಗೆ ದುಡಿಕೀನೆ ಇಲ್ಲ. ಉಣ್ಣೋದು, ಮನ್ಯಾಗೆ ಕೂಡೋದು. ಗೌಡರ ಹೊಟ್ಟಿ ಬೆಳೆದುಬಿಟ್ಟಿತ್ತು. ದೊಡ್ಡ ಡಬರೀನೆ ಆಗಿತ್ತು. ಕಿಡಿಗೇಡಿ ಹುಡುಗರು ಅವರಿಗೆ 'ಡಬರೀ ಗೌಡ' ಅಂತಾ ಕರೀತಿದ್ದರು. ಹಲ್ಲು ಮುಂದೆ ಬಂದಿದ್ದರ 'ಹಲ್ಲ್ಯಾ' ಅನ್ನೋದಿಲ್ಲ? ಹಾಂಗೆ. ಗೌಡರು ಹಿಂದಿನ ಕಾಲದವರು. ಆಗಿನ್ನೂ ಅದೇ ಸಾಯಿಕಲ್ಲು ದೊಡ್ಡೂರಾಗ ಒಂದೊಂದೇ ಬಂದಿದ್ದೂ ಅಂತ. ಜನರು ಸಾಯಕಲ್ಲಿಗೆ 'ಯಂತ್ರ-ಯಂತ್ರ' ಅಂತಾ ಅಂತಿದ್ದರು. ಹೊಲಿಗೀ ರಾಟಿಗೆ-ನೂಲೂ ರಾಟಿಗೆ ಇನ್ನೂ ಯಂತ್ರ ಜಂತ್ರ ಅನ್ನೂದಿಲ್ಲ ನಾವು? ಯಂತ್ರದ ಹೊಲಿಗೀ ಅಂತೀವಿ. ಗೌಡರು ಸಾಯಕಲ್ಲ ಯಂತ್ರ ತರಿಸಿದರು. ಹಾಗೂ ಹೀಗೂ ಡಬರೀಗೌಡರು ಕೂಡೋದು ಕಲಿತರು. ಈ ಯಂತ್ರದ ಮೇಲೆ ಕೂತು ಕೊಂಡು ಒಂದು ದಿನಾ ಚಾವಡಿಗೆ ಹೊರಟರು. ಗೌಡರು ಆ ದಿನ ಯಾವ ಅಪಶಕುನದ ಮಾರೀ ನೋಡಿದ್ದರೋ ಏನೋ, ಪಾಪ? ಹಳ್ಯಾಗಿನ ಸಂದೀ ಓಣಿ. ಎಡಕ್ಕೆ ಒಂದು ಟಗರು. ಹೀಂಗ ಹೀಂಗ ಕೋಡು ಇದ್ದದ್ದು ನಿಂತಿತ್ತು. ಅದು ಎಲಿ ತಿಂತಿತ್ತು. ಬಲಕ್ಕ ಬದನೀಕಾಯಿ ಮಾರೂವಾಕಿ ಬಂದಳು. ಎದುರಿಗೊಂದು ಒಂಟಿ ಬಂತು. ಉದ್ದ ಗೋಣಿನದು-ಚೋಟು ಬಾಲದ್ದು. ನೋಡಿರಲ್ಲ ಒಂಟೀನ. ಗೌಡರ ಫಜೀತಿ ಆತು. ತೂಕ ತಪ್ಪಿತು. ಝೋಲಿ ಹೋತು. ಕಡಕೊಂಡು ಬಿದ್ದರು. ದೊಡ್ಡ ಆಳು. ದೊಡ್ಡ ಹೊಟ್ಟಿ. ಮುಂದಿನ ಗಾಲಿ ಮಡಿಚಿಹೋತು. ಡಬರೀಗೌಡರ ಕಾಲು ಒಳೀತು. ಚಾವಡಿಗೆ ಹೋಗೂದು ಬಿಟ್ಟರು. ಕುಂಟಿಕೋತ ಮನೀಗೆ ಬಂದರು. ಗೌಡಿತಿ ಆಗ ತಾನೇ ಕಡಗೋಲು ಹಿಡಿದು ಮಜ್ಜಿಗೀ ಕಡೀತಿದ್ದಳು. ಯಜಮಾನ ಕುಂಟಿಕೋತ ಮನಿಗೆ ಬಂದಾನ. ಅದರಾಗ ಗೌಡರ ಬಾಯೀನೂ ಜೋರು. ಏನಾದರೂ ತೆಯಿದು ಹಚ್ಚಬೇಕು. ಪಾಪ! ಹೆಣ್ಣುಮಗಳು.

ಗಾಬರಿ ಆಗಿದ್ದಳು. ಮೂಲ್ಯಾಗಿನ ಅರಿಯೂಕಲ್ಲ ತಂದಳು. ಧೂಳು ಮುಸಕಿತ್ತು. ಅದನ್ನ ತೊಳೀಲಿಕ್ಕೆ ನೀರಮನಿಗೆ ಹೋದಳು. ನೀರು ತುಂಬಿದ ರಂಜಣಿಗಿ ಇತ್ತು. ಕೈಯಾಗಿನ ಅರಿಯೂಕಲ್ಲು ಜಾರಿತು. ರಂಜಣಿಗೀ ಮೇಲೆ ಬಿತ್ತು. ಅದು 'ಠಳ್ಳ' ಯೆಂದು ಒಡೀತು. ರಂಜಣಿಗೀಗೆ ನಡುವೆ ದೊಡ್ಡದೊಂದು ಭೋಕು ಬಿತ್ತು.

ಇಂದ, ಗೌಡರನ ಇಷ್ಟಕ್ಕ ಬಿಡೋಣ. ನರಳಿಕೋತ ಮಲಗ್ಯಾರ. ಮಲಗಲಿ. ಗೌಡರ ಕಷ್ಟ ಇಷ್ಟಕ್ಕ ಮುಗಿಲಿಲ್ಲ. ಮುಂದೇನಾತು ನಾಳೆ ನೋಡೋಣ.

ನಿನ್ನೆ ಜಕ್ಕಪ್ಪನ್ನ ನೋಡಿದರಲ್ಲ. ಈ ದಿನ ಡಬರೀಗೌಡರನ ನೋಡೀರಂತ. ಅವರ ಮೂರಾಬಟ್ಟಿ ಆದ ಸಾಯಕಲ್ ಯಂತ್ರ, ಟಗರು, ಒಂಟಿ ಎಲ್ಲಾನೂ. ಈ ಫಳದ ಮೇಲೆ ಬೊದಲು ನಾ ತೆಗಿತೀನಿ. ಮುಂದ ನೀವೂ ಬರೆದೀರಂತ.

ಸೂಚನೆ ೧: ಮೊದಲನೆಯ ಪಟದಲ್ಲಿ ಹೇಳಿಕೊಟ್ಟಂತೆ.

ಒಳ್ಳೇದು, ನೋಡಿದರಲ್ಲ ಡಬರೀಗೌಡರನ್ನ. ಸಾಕೇನು ಇಷ್ಟು ಹೊಟ್ಟಿ ಗೌಡರಿಗೆ? ಇವರು ಯಾರು? 'ಡಬರೀಗೌಡ' ಇದು ಏನು? 'ಟಗರು' ಏನು ತಿನ್ನತದೆ? 'ಎಲಿ' (ಇತ್ಯಾದಿ).

ಜಕ್ಕಪ್ಪನ ಕಥೀ ಕೇಳಿತ್ತಲ್ಲಾ—ಅದೇ ಕೂಸು ಈ ಕಥೀನೂ ಕೇಳಿತು. ಚಿತ್ರಾನೂ ತೆಗೀತು. ಹೇಗೆ ತೆಗೀತು ತೋರಿಸತೀನಿ. ನೀವೂ ಮುಂದ ಬರದೀರಂತ.

ಸೂಚನೆ ೨: ಮೊದಲನೆಯ ಪಟದಲ್ಲಿ ಹೇಳಿಕೊಟ್ಟಂತೆ.

ಇವು ಸಣ್ಣ ಕೂಸು ಬರೆದ ಚಿತ್ರ. ಇದೇನು? 'ಟಗರು' ಇದು? 'ಚಾವಡಿ' ಇದು? 'ಮನೆ' (ಇತ್ಯಾದಿ). ಹೇಳೀ ಕೇಳೀ ಸಣ್ಣ ಕೂಸು. ಇನ್ನೂ ಪೂರಾ ಮಾತು ಬರೋದಿಲ್ಲ. ಹಿಂದ ನೋಡಿದಿರಲ್ಲ—ಜಕ್ಕಪ್ಪಗ 'ಜ', ಗುಡಿಗೆ 'ಗು' ಅಂತಿತ್ತಲ್ಲ! ಹಾಗೇನ. ಡಬರೀ ಗೌಡಗ—'ಡ', ಟಗರಿಗೆ—'ಟ', ಎಲಿಗೆ—'ಎ' ಅನ್ನುತ್ತಿತ್ತು.

(ಚಾವಡಿಗೆ ಮಾತ್ರ, ಶಿಕ್ಷಕನು ವಯಸ್ಕರನ್ನು ಮರೆಮಾತಿಗೆ ಹಾಕಿ, ತನ್ನ ಮಾತಿನ ಚಳಕದಿಂದ ಕೂಸು ಚಾವಡಿಗೆ 'ಚ' ನೇ ಅಂತಿತ್ತು ಎಂದು

ಹೇಳಿ ಅವರಿಂದ ಅನೇಕ ಸಲ ಹೇಳಿಸಿ ಸ್ಥಿರಗೊಳಿಸಬೇಕು. ಆಕಾರದಲ್ಲಿ ' ಚ ' ಹೋಲುವ, ಚಿತ್ರದಲ್ಲಿ ರೂಪಿಸಬಹುದಾದ ವಸ್ತುವು ಬೇರೊಂದು ದೊರೆಯುವದಿಲ್ಲ. )

ಸೂಚನೆ ೩ : ಮೊದಲನೆಯ ಪಟದಲ್ಲಿ ಹೇಳಿಕೊಟ್ಟಂತೆ.

( ಸಣ್ಣ ಕೂಸು ತೆಗೆದಿದೆಯೆಂದು ಹೇಳುವ ಚಿತ್ರಗಳನ್ನು ತೋರಿಸಿ ) : ಇದಕ್ಕೆ ಸಣ್ಣ ಕೂಸು ಏನನ್ನುವದು ? ' ಡ ', ಇದಕ್ಕೆ ? ' ಮ ' . . . . ( ಇತ್ಯಾದಿ ) ಹೌದು. ಇದಕ್ಕೇನೆ ' ಡ ' ಅಕ್ಷರವೆನ್ನುವರು. ಇದಕ್ಕೆ ' ಟ ' ಅಕ್ಷರವೆನ್ನುವರು ( ಇತ್ಯಾದಿ ).

ಇಕೊ, ಇವನ್ನೆಲ್ಲಾ ಅಳಿಸಿಬಿಡತೇನೆ. ಒಂದೊಂದಾಗಿ ಬಿಡಿಬಿಡಿಯಾಗಿ ಬರೀತೇನೆ. ಈಗ ಹೇಳಿರಿ. ಇದೇನು ? ' ಯ '. ( ಇತ್ಯಾದಿ. ಹೀಗೆ ಎಲ್ಲ ಅಕ್ಷರಗಳ ಉಜಳಣಿಯನ್ನು ತೆಗೆದುಕೊಳ್ಳುವದು. ಆಮೇಲೆ ಅಕ್ಷರಗಳ ಜೋಡಣೆ, ಶಬ್ದರಚನೆ ).

ಒಳ್ಳೇದು, ಇದೇನು ? ' ಚ ', ಇದು ? ' ಟ ' ' ಚ-ಟ ' ಕೂಡಿಸಿ ಹೇಳಿರಿ. ' ಚಟ ', ಇದು ? ' ಮ ', ಇದು ? ' ಠ ', ' ಮ-ಠ ' ಕೂಡಿಸಿ ಹೇಳಿರಿ. ' ಮಠ '. ( ಹೀಗೆ ಅಕ್ಷರಗಳನ್ನು ಹಿಂದುಮುಂದಾಗಿ ಜೋಡಿಸಿ ಶಕ್ಯವಿದ್ದಷ್ಟು ಶಬ್ದರಚನೆ ಮಾಡಿಸಬೇಕು )

ಸೂಚನೆ ೫ : ಮೊದಲನೆಯ ಪಟದಲ್ಲಿ ಹೇಳಿಕೊಟ್ಟಂತೆ.

# ಪಾಠ ಮೂರನೇದು

ಡಬರೀಗೌದರಿಗೆ ಈಗ ಗುಣ ಆಗೇದ. ಬಡಗೀ ಹಿಡಿದು ಓಡಾಡತಾರ. ಗೌಡರು ಸಂಜೀಮುಂದ ತೋಟದ ಕಡೆಗೆ ಹೋರಟರು. ಕೈಯಾಗ ಬಡಗಿ ಇತ್ತು. ಗೌಡರ ಊರಿಗೆ ಸರ್ಕಸ್ಸು ಬಂದಿತ್ತು. ಊರ ಮುಂದಿನ ತೋಟ, ನೀರೂ ನೆಳಲು. ಅಲ್ಲೇ ತಂಬು ಹೊಡೆದಿದ್ದರು. ಗಿಡದ ನೆಳಲಿಗೆ ಆನೀ ಕಟ್ಟಿದ್ದರು. ಆನೀ ಸೊಂಡ್ಯಾಗ ಗೌಡರು ತಮ್ಮ ಬಡಿಗೀ ಕೊಟ್ಟರು. ಆನೀ ಸಾಕಿದವ ಆನೀ ಕಡಿಂದ ಸಲಾಮು ಹೊಡಿಸಿದ. ತಮ್ಮೂರಿಗೆ ಗೌಡರೇ ರಾಜಾ ಅಲ್ಲ! ಗೌಡರು ಮುಂದ ತೋಟದಾಗಿನ ಬದನೀ ಮಡಿಗೆ ಹೋದರು. ಗೌಡರು ಮನ್ಯಾಗ ಮಲಗಿದರೆ ಆಳು ಯಾಕೆ ದಗದಾ ಮಾಡತಾರ? ಬದನೀ ಮಡೀ-ಯೊಳಗ ಕಸ ಬೆಳೆದಿತ್ತು. ನೆಗ್ಗಲೀಮುಳ್ಳು ಹಬ್ಬಿತ್ತು. ಕಾವಲೀ ದಂಡೆಗೆ ಹೀಂಗ ಕೂತರು. ಸಳ ಸಳ ಸಪ್ಪು ಆತು. ನೋಡತಾರ ಒಂದು ಹಸರು ಹಾಂವು. ಕೈಯಾಗ ಬಡಿಗಿ ಇತ್ತು. ಒಂದು ಏಟಾ ಕೊಟ್ಟರು. ಬಡಿಗಿ ಜಾರಿತು. ಹಾಂವು ಕಾಲಾಗ ಬಂದಹಾಂಗ ಆಯಿತು. ಗೌಡರು ಜಿಗಿದರು. ಏನೋ ಚುಚ್ಚಿದಹಾಂಗ ಆತು. ಗೌಡರು 'ಐ' ಅಂದರು. ನೆಗ್ಗಲೀ ಮುಳ್ಳಿರಬೇಕು. ಗೌಡರಿಗೆ ಹಾಂವು ಕಡೀತೇನೋ ಅಂತಾ ಸಂಶಯ ಬಂತು. ನೆಗ್ಗಲೀಮುಳ್ಳು' ಚುಚ್ಚಿರಬೇಕು. ಸಂಶಯ ಬಹಳ ಕೆಟ್ಟ. ಗೌಡರ ಮನಸ್ಸಿನಾಗ ಸಂಶಯ ಉಳೀತು. ಹಾಂವು ಕಡಿದರ ಮಲಗಬಾರದೆಂದು ಹೇಳತಾರ. ವಿಷ ಏರತದಂತ. ಗೌಡರು ಜಾಗರಣಿ ಮಾಡಬೇಕಾತು: ರಾತ್ರೀ ಹೇಗೆ ಕಳೀಬೇಕು. ಎಲ್ಲಾ ಗೌಡರಿಗೂ ಒಂದೊಂದು ನಾದ ಇರತದ. ಡಬರೀಗೌಡರಿಗೆ ತಬಲಾದ ನಾದ ಇತ್ತು. ಬೆಳತನಕ ತಬಲಾ ಬಡದರು. ಆದರೂ ಗೌಡರ ಸಂಶಯ ಹೋಗ-ಲಿಲ್ಲ. ಮನ್ಯಾಗ ಹೇಳಿದರು. ದೊಡ್ಡೂರಾಗ ಡಾಕ್ಟರು ಚುಚ್ಚಿ ಹಾಕತಾರ. ಜಕ್ಕಪ್ಪ ಪೂಜಾರಿ ಮಂತ್ರಾನೂ ಹಾಕತಾನ. ಹೋಗಿ ಬರ್ರಿ. ಈಗ ಚುಚ್ಚೊದೊಂದು ಆಗೇದಲ್ಲ ಎಲ್ಲಾ ಬೇನೆಗೂ. ಗೌಡರು ಒಪ್ಪಿದರು. ಸಾಯಿಕಲ್ಲ ಯಂತ್ರ ಅಂತೂ ಮೂರಾಬಟ್ಟೆ ಆಗಿ ಬಿದ್ದಿತ್ತು. ಕುದುರೀ ಮೇಲೆ ಕೂತು ಹೊರಟರು. ಬಹಳ ದಿನಾ ಆಗಿತ್ತು. ಕುದುರೀ ಸಾಮಾನದ ಕಡೆಗೆ

ನೋಡಿದ್ದಿಲ್ಲ. ಹಾದ್ಯಾಗ ಲಗಾಮು ಹರೀತು. ಕುದುರೀ ಕೊರಳಿಗೆ ಕಟ್ಟಿ-ದರು. ಹಲ್ಯಾ, ಹಲ್ಯಾ ಮಾಡಿಕೋತ ಮುಂದೆ ಸಾಗಿದರು. ಅದೇನೊ ಹಿರಿಯರು ಹೇಳತಾರಲ್ಲ, ಎಡವಿದ ಬಟ್ಟು ಎಡವತದ ಅಂತ. ಕಷ್ಟ ಒಂದರ ಹಿಂದ ಒಂದ ಬರತಾವ. ಗೌಡರಿಗೆ ಕಾಡೋದು ಇನ್ನೂ ಮುಗಿದಿದ್ದಿಲ್ಲ. ನೀರಿಗೆಂತ ಕುದುರೀ ಝರಿಗೆ ಒಯ್ದರು. ಕುದುರೀ ಕಾಲು ಜಾರಿತು. ಕಲ್ಲ ಫಡೀ ಮೇಲೆ ಫಡಾನೆ ಕಡಕೊಂಡು ಬಿದ್ದರು. ಮುಂದಿನ ಹಲ್ಲು ಮುರೀತು. ಬಳ ಬಳ ರಕ್ತ ಸುರೀತು. ನೋವು ಬಹಳ ಆತು. ಹಲ್ಲು ಕಿತ್ತಿಸಬೇಕಾತು. ದೊಡ್ಡೂರಾಗ ಡಾಕ್ಟರ ಜನರು ರೊಕ್ಕಾ ತಗೊಂಡು ಹಲ್ಲು ಕಿತ್ತತಾರ. ಗೌಡರು ಹಲ್ಲಿನ ಡಾಕ್ಟರ ಕಡಿಗೆ ಹೋದರು. ಇಕ್ಕಳ ನೋಡಿರಲ್ಲಾ. ಡಾಕ್ಟರರು ಇಕ್ಕಳದಲೆ ಹಲ್ಲು ಕಿತ್ತಿದರು. ಸಮಾಧಾನ ಆತು. ಗೌಡರು ಊರಿಗೆ ಹೋದರು. ಹಾವಿಗೆ ಔಷಧಾ ಅಂತ ಹೋದರು; ಹಲ್ಲು ಕಿತ್ತಿಸಿಕೊಂಡು ಮನಿಗೆ ಬಂದರು. ದೈವದಾಟ!

ನಿನ್ನಿನ ಹಾಂಗ ಈವತ್ತೂ ಗೌಡರ ಕಥ್ಯಾಗ ಏನೇನು ಆತು ಎಲ್ಲಾ ಚಿತ್ರಾ ತೆಗೆಯೋಣ. ಮುಂದ ನೀವೂ ಬರೆದೀರಂತ.

ಸೂಚನೆ ೧: ಮೊದಲನೇ ಪಟದಲ್ಲಿ ಹೇಳಿಕೊಟ್ಟಂತೆ.

ಆನಿ ಸೊಂಡೀಯೊಳಗ ಬಡಿಗೀ ಹಿಡಿದು ಗೌಡರಿಗೆ ಸಲಾಮು ಮಾಡೋದು ಬರೋಬರಿ ಆಗೇದಲ್ಲ? ಗೌಡರು ಬಡಗೀಲೆ ಏಟು ಕೊಟ್ಟಾಗ ಹೇಗೆ ಕೂತಿದ್ದರು? 'ಐ' ಅಂದು ಎರಡೂ ಕೈ ಮುಂದೆ ಚಾಚಿ ಹೇಗೆ ಕೂತಿದ್ದರು? ಚಿತ್ರದಾಗ ತಿಳೀತದಲ್ಲ? ಒಳ್ಳೇದು. ಹೇಳಿರಿ ಇನ್ನ. ಇದು ಏನು? 'ಆನೆ'. ಗೌಡರು ಏನು ಅಂದು ಕೂತಾರ ಇಲ್ಲೆ? 'ಐ' ಅಂತ. ಕುದುರೀ ಕೊರಳಿಗೆ ಏನು ಜೋತಾಡತದ? 'ಲಗಾಮು' . . . (ಇತ್ಯಾದಿ)

ನಿನ್ನಿನ ಕೂಸು ಈ ಕಥೀನೂ ಕೇಳಿತು. ಚಿತ್ರಾನೂ ತೆಗೀತು. ಹೇಗೆ ತೆಗೀತು ತೋರಿಸತೀನಿ. ನೀವೂ ಮುಂದ ತಗಿದೀರಂತ.

ಸೂಚನೆ ೨: ಮೊದಲನೆ ಪಟದಲ್ಲಿ ಹೇಳಿಕೊಟ್ಟಂತೆ.

ಇವೆಲ್ಲ ಸಣ್ಣ ಕೂಸು ಬರೆದ ಚಿತ್ರ. ಇದೇನು? 'ಆನೆ'. ಗೌಡರೇ ನಂದರು? 'ಐ' ಅಂದರು? ಇದೇನು 'ಲಗಾಮು'....(ಇತ್ಯಾದಿ)

ಸಣ್ಣ ಕೂಸು. ಇನ್ನೂ ಪೂರಾ ಮಾತು ಬರೋದಿಲ್ಲ. ಹಿಂದೆ ನೋಡಿದರಲ್ಲ, ಡಬರೀಗೌಡಗ ಏನು ಅಂತಿತ್ತು? 'ಡ'. ಹಾಗೆಯೇ ಆನೆಗೆ ಸಣ್ಣ ಕೂಸು ಏನು ಅನತದ? 'ಆ', ಏಟಿಗೆ 'ಏ'....( ಇತ್ಯಾದಿ. ಹಾವಿಗೆ ಮಾತ್ರ 'ಉ' ಎನ್ನುವದನ್ನೂ, ಇಕ್ಕಳಕ್ಕೆ 'ಳ' ಎನ್ನುವದನ್ನೂ ಹಿಂದೆ ಹೇಳಿದಂತೆ ಮಾತಿನಲ್ಲಿ ತೇಲಿಸಿಕೊಂಡು ಸ್ಥಿರಗೊಳಿಸಬೇಕು)

ಸೂಚನೆ ೩: ಮೊದಲನೆ ಪಟದಲ್ಲಿ ಹೇಳಿಕೊಟ್ಟಂತೆ.

( ಸಣ್ಣ ಹುಡುಗ ತೆಗೆದಿದೆಯೆಂದು ಹೇಳುವ ಚಿತ್ರಗಳನ್ನು ತೋರಿಸಿ ) ಇದಕ್ಕೆ ಸಣ್ಣ ಕೂಸು ಏನನ್ನುವದು ? 'ಅ'. ಹೌದು ಇದಕ್ಕೇನೆ 'ಅ' ಅಕ್ಷರಯೆನ್ನುವರು. ( ಇದೇ ರೀತಿಯಾಗಿ ಉಳಿದ ಆಕೃತಿಗಳು ಯಾವ ಅಕ್ಷರಗಳೆಂಬುವದನ್ನು ಹೇಳಿಕೊಡಬೇಕು. ಆಕೃತಿಗಳು 'ಅಕ್ಷರ' ಗಳೆಂಬುವದನ್ನು ಅವರು ತಿಳಿಯುವಂತೆ ಮತ್ತೆ ಮತ್ತೆ ಅವರಿಂದ ಹೇಳಿಸಿಕೊಳ್ಳಬೇಕು. )

ಇದು ಯಾವ ಅಕ್ಷರ ? 'ತ'. ಇದು ? 'ಳ'. 'ತ-ಳ' ಕೂಡಿಸಿ ಹೇಳಿರಿ. 'ತಳ'. ಹೌದು. ( ಹೀಗೆಯೇ ಎಲ್ಲ ಅಕ್ಷರಗಳ ಉಜಳಣಿಯನ್ನು ಹಿಂದುಮುಂದಾಗಿ ಜೋಡಿಸಿ, ಹಿಂದಿನ ಎರಡು ಪಟಗಳಲ್ಲಿಯ ಅಕ್ಷರಗಳನ್ನು ಸೇರಿಸಿ ಶಬ್ದರಚನೆ ಮಾಡಬೇಕು, ಮಾಡಿಸಬೇಕು. ಓದಿಸಬೇಕು. ಬರೆಸಬೇಕು. )

ಸೂಚನೆ ೪: ಮೊದಲನೆ ಪಟದಲ್ಲಿ ಹೇಳಿಕೊಟ್ಟಂತೆ.

# ಪಾಠ ನಾಲ್ಕನೇದು

ಡಬರೀಗೌಡರ ಕಥೀ ನೀವು ಕೇಳಿದಿರಿ. ಆದರ ನಿಮಗ ಆದನ್ನ ನಾನು ನೆಟ್ಟಗ ಪೂರಾ ಹೇಳಲಿಲ್ಲ. ಗೌಡರು ಶಹರಕ್ಕ ಹೊರಟರಲ್ಲ, ಹಾದ್ಯಾಗ ಏನೇನು ನೋಡಿದರು, ಏನೇನು ಮಾಡಿದರು ಇದನ್ನೆಲ್ಲ ಹೇಳೂದು ಮರೆತೇ ಬಿಟ್ಟೆ. ಈವತ್ತು ಹೇಳತೀನಿ. ಸಾಯಿಕಲ್ಲ ಯಂತ್ರದ ಮೇಲಿಂದ ಗೌಡರು ಬಿದ್ದರಲ್ಲ. ಒಳಪೆಟ್ಟಾಗಿತ್ತು. ಗೌಡತಿ ಸಾರಜ್ಞದ ಕೋಡು ತೇದು ಹಚ್ಚಿದಳು. ನಿಮಗ '**ಸಾರಜ್ಞ**' ಬರೀಲಿಕ್ಕೆ ಬರೂದಿಲ್ಲ. 'ಸಾ-ರ'-.' ಬರೀರಿ ಮುಂದೆ ಜ್ಞ ಬರೀಬೇಕು. 'ಜ್ಞ' ಹೀಗ ಬರೀಬೇಕು. ಅದು ಜೋಡಕ್ಷರ. ಮುಂದೆ ಕಲಿತೀರಂತ. ಅದರಾಗ 'ಜ್ಞ' ಅಕ್ಷರಬೇಕು. 'ಜ' ಹೀಗ ಬರೀಬೇಕು. ( ಉಚ್ಚಾರ ಬಾಯಲ್ಲಿ ಕೂಡುವಂತೆ ಮಾಡಬೇಕು ). ಚಿತ್ರಾ ಬರಿಬೇಕೆಂದರೇನು ? ಛೆ ! ಈಗ್ಯಾಕ ಚಿತ್ರ ? ನಮ್ಮ ಸಣ್ಣಾ ಕೂಸು ಈಗ ದೊಡ್ಡದಾತು. ನಿಮಗ ಇನ್ನೂ ಅಕ್ಷರ ಏನೂ ಬರತಿದ್ದಿಲ್ಲಾ. ನೀವು ಸಣ್ಣಾ ಕೂಸಾಗಿದ್ದಿರಿ. ಚಿತ್ರ ಬೇಕಾತು. ಈಗ ಅಕ್ಷರ ಬಂದಾವ. ದೊಡ್ಡವರಾದಿರಿ. ಚಿತ್ರ ಯಾಕ ಬೇಕು ? ಜಕ್ಕಣ್ಣ ಬಾಯಿ ಮಾಡಿದನಲ್ಲ. 'ಓ' ಅಂತ. 'ಓ'-ಬರೀರಿ. ಹೊಟ್ಯಾಗ ಒಂದು ಪೂಜಿ ಕೊಡಿರಿ. 'ಜ' ಆಗತದ. ಬಹಳ ಸಸಾರ !

ಒಳ್ಳೇದು. ಗೌಡರೇನು ಅಸಿಮಿಸಿ ಆಳಲ್ಲ. ಮುಂದೀ ಮಾತಿಗೆ **ಅಂಜಿಕಿ.** 'ಅಂಜಿಕಿ' ಬರೀಲಿಕ್ಕೆ ಬರತದೇನು ನಿಮಗ ? ಬರೂದಿಲ್ಲ. ಮೊದಲಿಷ್ಟು ಜಾಗಾ ಖಾಲಿ ಬಿಟ್ಟು '—ಜಿಕಿ' ಬರಿಯಿರಿ. ಇದು ನೋಡಿರಿ. ನಾನು ಪೂರಾ ಮಾಡತೇನೆ. 'ಅಂಜಿಕಿ'. ಬಿಟ್ಟ ಜಾಗಾದಾಗ ನಾನು ಅಕ್ಷರ ಬರದೀನಲ್ಲಾ ಅದಕ್ಕೂ 'ಅಂ' ಅಂತಾರ. ( ಅನಿಸಬೇಕು ) 'ಅಂ' ಬರಿಯೋದೇನು ಬಿಗಿ ಅಲ್ಲ. ಆರಿಯೂ ಕಲ್ಲಿನ 'ಅ' ಬರೀಬೇಕು. ಅದರ ಮುಂದ ಹೀಗೆ ಪೂಜಿ ಕೊಡಬೇಕು. 'ಅಂ' ಆತು. 'ಅಂ-ಬಿಗೇರು, ಅಂ-ಗಡಿ, ಅಂ-ಗಳ,' ಹೀಗೆ ಬರೀಬೇಕು. 'ಅ'ದ ಮುಂದ ಪೂಜಿ ಕೊಟ್ಟರ 'ಅಂ' ಆತು. 'ಗ'ದ ಮುಂದ ಪೂಜಿ ಕೊಟ್ಟರ 'ಗಂ' ಆತು. ಇದರಂತೆ ತಂ, ರಂ, ಡಂ.( ಇತ್ಯಾದಿ ).

ಶಹೆರದಾಗ ಗೌಡರು ಎಲ್ಲಿ ಇಳೀಬೇಕು ? ಬೀಗರ ಔತಣ ನೆನಪಾತು. ಅಲ್ಲಿಗೇನೆ ಹೋಗೂದು ಮಾಡಿದರು. 'ಔ ತ ಣ' ನಿಮಗ ಬರೀಲಿಕ್ಕೆ ಬರೂದಿಲ್ಲ. 'ಔ' ಹೀಗೆ ಬರೀಬೇಕು. ಜಕ್ಕಪ್ಪನ 'ಜ' ಬರಿದು ಗಂಟು-ಮಾಡಿ ಕಾಲು ಕೊಟ್ಟರಾತು. ( ತೋರಿಸಬೇಕು–ಅನಿಸಬೇಕು ). 'ಔಡಲ, ಔದುಂಬರ' ಹೀಗೇನೆ ಬರೀಬೇಕು. 'ಣ' ಬರಿಯೋದೂ ಸಸಾರ. ಟಗರಿನ 'ಟ' ಡಬ್ಬ ಹಾಕಿದರಾತು. 'ಣ' ಆಗತದ. 'ಪಣತಿ–ಗಣತಿ' ಇದರಲ್ಲಿ 'ಣ' ಹೀಗೇನೆ ಬರೀಬೇಕು.

ಡಬರೀಗೌಡರು ಹೊರಟರಲ್ಲ ? ಅದೇ ದಿನ ಸರ್ಕಸ್ಸಿನವರೂ ಊರು ಬಿಟ್ಟರು. ಏನು **ಖಟಾಟೋಪ** ಅವರದು ? 'ಖಟಾಟೋಪ' ಹೀಗೆ ಬರೀಬೇಕು. 'ಖ' ಇದು 'ಬ'ದ ಗತೀನೆ. ಆದರೆ ಹೊರಗಂಟು ಮಾಡಬೇಕು. ಇದಕ್ಕ ದೊಡ 'ಕ' ಅಂತಾರೆ. ಪಣತಿ ಒಡೀತಲ್ಲಾ. 'ಫಟ್' ಅಂತಾ. 'ಫ' ಇದು ದೊಡ 'ಪ'. ರಂಜಣಿಗೆ ಒಡೀತಲ್ಲಾ. 'ಠಳ್' ಅಂತಾ. 'ಠ' ಇದು ದೊಡ 'ಟ'. 'ಖಡುವು, ಖಬರೀ' ಹೀಗೇನೆ ಬರೀಬೇಕು.

ಹುಲೀ–ಸಿಂಹ ಇವುಗಳ '**ಪಞ್ಜರ**' ಗಾಡಿ ಮುಂದೆ ಹೊರಟಿದ್ದವು. 'ಜ್ಞ' ಜೋಡು ಅಕ್ಷರ ಅಂತಾ ಹೇಳಿದೆನಲ್ಲ. 'ಞ್ಜ' ಇದೂ ಒಂದು ಜೋಡು ಅಕ್ಷರ. ಮೇಲಿನ ಅಕ್ಷರಾನ 'ಞ'. ಏತರಹಾಂಗ ಆದೇ ಹೇಳಿರಿ. ಹೌದು. 'ಇಲಿ' ನೋಡಿದಿರಲ್ಲ. ಜಕ್ಕಪ್ಪನ ಕಥೀಯೊಳಗ. 'ಇ' ಬರೆದು ಅದಕ್ಕೆ ಇನ್ನೊಂದು ಬಾಲಾ ಹಚ್ಚಬೇಕು.

ಅದೇ ಹೊತ್ತು ಏರಿತ್ತು. **ಭರಮಾ**-, ಗೌಡರ ಆಳು. ಹೊಲಕ್ಕ ಹೊರ-ಟಿದ್ದ. ನಿಮ್ಮೊಳಗ ಭರಮಪ್ಪ ಯಾರಾರೆ ಇದ್ದೀರೇನು ? ನಿಮ್ಮ ಹೆಸರು ಬರೀರಿ. ನಾ ಹೇಳತೀನಿ. ಬದನೀಕಾಯಿ 'ಬ' ಬರೆದು ಕೆಳಗ ಒಂದು ಗೀಟು ಕೋಡಿರಿ. 'ಭ' ಆತು. ಇದಕ್ಕೂ ದೊಡ 'ಬ' ಅಂತಾರ. 'ಭಿಡೆ, ಭಗಭಗ' ಹೀಗೇನೆ ಬರೀಬೇಕು.

ಭರಮಾ ಹೊಲಕ್ಕ **ದನಾ** ಹೊಡಕೊಂಡು ಹೊರಟಿದ್ದ. 'ದನ' ಹೀಗೆ ಬರೀಬೇಕು. ಇದು 'ದ'. ಕುರೀದಡ್ಡಿ ಮಾಡಿ ಮುಂದ ಒಂದು ಬಾಗಿಲ ಮಾಡಬೇಕು. ದಮಡಿ, ಧರ ದರ, ದರಕಾರ, ದುಡಿತ, ದೇವರು ಹೀಂಗೆ ಬರೀಬೇಕು.

ಹಳ್ಳೀರಸ್ತೆ–ತೆಗ್ಗೂ ತೆವರು. ಪಞ್ಜರದ ಗಾಡಿ ಓಡುವಾಗ್ಗೆ '**ಧಡಧಡ**' ಸಪ್ಪಳ ಆಗತಿತ್ತು. 'ಧಡ ಧಡ' ಹೀಗೆ ಬರಿಯಿರಿ. ಆಗಳೇ 'ದ' ಬರೆದಿರಲ್ಲ.

ಕೆಳಗೆ ಒಂದು ಗೀಟು ಕೊಡಬೇಕು. ‘ಧ’ ಆಗತದೆ. ಇದಕ್ಕೊ ದೊಡ ‘ದ’ ಅಂತಾರೆ. ‘ಧಪ ಧಪ’, ‘ಧಬಧಬೆ’ ಹೀಗೇನೆ ಬರೀಬೇಕು. ‘ಧಡ ಧಡ’ ಸಪ್ಪಳಾ ಕೇಳಿ ದನಾ ಬೆದರಿ ಹೋದವು. ಇತ್ತಲಾಗ ಗೌಡರೂ ಊರಿಗೆ ಹೋಗುವ ತಯಾರಿ ನಡೆಸಿದರು.

ಇವತ್ತ ನೀವು ಬೇರೆ ಹೊಸಾ ಅಕ್ಷರ ಕಲಿತೀರಿ. ಬರೀತೀರಾ ನಾ ಹೇಳಿದ ಹಾಂಗ? ‘ಅಂ’, ‘ಗ’, ‘ಳ’ ಬರೀರಿ. (ಹೀಗೆಯೆ) ಔ-ಡ-ಲ, ಔ-ತ-ಣ, ಖ-ಣ, ಭ-ಣ—ಭ-ಣ (ಇತ್ಯಾದಿ. ಇಂದು ಹೊಸದಾಗಿ ಕಲಿತ ಅಕ್ಷರಗಳಿಂದ ಶಬ್ದರಚನೆ ಮಾಡಿ ಓದಿಸಬೇಕು—ಬರೆಸಬೇಕು).

ಇಂದು ಹೊತ್ತಾತು. ಇನ್ನೊಂದು ನಾಲ್ಕುಮಾತು ಗೌಡರಬಗ್ಗೆ ಹೇಳೋದದೆ. ನಾಳಿಗೆ ಹೇಳತೀನಿ. ನೋಡಿಕೊಂಡು ಹೋಗರಿ ಮತ್ತ. ಕಾಲು ಜಾರತದ ಅಲ್ಲೆ. ನಿಮಗೂ ಡಬರೀಗೌಡರ ಗತಿ ಆದೀತು. ನಾಳಿಗೆ ಬರತೀರಿ? ನಮಸ್ಕಾರ.

# ಪಾಠ ಐದನೇದು

ನಿನ್ನೆ ನೋಡಿದಿರಲ್ಲಾ ಸರ್ಕಸಿನವರೂ ಊರು ಬಿಟ್ಟರು. ಗೌಡರೂ ಹೊರಡೂ ತಯಾರಿ ಮಾಡಿದರು. ಕುದುರೆಗೆ ಥಡಿ ಹಾಕಿಸಿದರು. ನಿಮಗ 'ಥಡಿ' ಬರೀಲಿಕ್ಕೆ ಬರೂದಿಲ್ಲ ಅಲ್ಲ? ನಾ ಹೇಳಿಕೊಡತೀನಿ. 'ಥ' ಅಕ್ಷರ ಥಡೀ ಗತೀನ ಅದ. ಕುದರೀ ಥಡೀಗೆ ಕಾಲಿಡೂ ತಂಗು ಜೋತು ಬಿದ್ದಿರೋ ದಿಲ್ಲ? ಹಾಗೆಯೆ. ಆದೂ ಬಿಡರಿ. ನಿನ್ನೆ 'ಧಡಾ ಧಡಾ' ಬರೆದಿರಲ್ಲ. 'ಧ' ಬರೀಬೇಕು. ಅದರಾಗ ಒಂದು ಸಣ್ಣ ಪೂಜಿ ಕೊಡಬೇಕು. 'ಥ' ಆತು. 'ಥ' ಕ್ಕ ದೊಡ 'ತ' ಅಂತಾರ. 'ರಥ, ಸಾರಥಿ, ಥೋಡೆ, ಥೂಥೂ' ದೊಳಗ 'ಥ' ಹೀಗೇನೆ ಬರೀಬೇಕು.

ಡಬರೀಗೌಡರು ಬೀಗರ ಮನಿಗೆ ಹೋಗುವವರು. ಬರೀಗೈಲೆ ಹೇಗೆ ಹೋಗತಾರೆ? ಮನೀತೋಟ. ಒಂದು 'ಛಲೋ' ರಸಬಾಳೀ 'ಘಡಾ' ತರಿಸಿದರು. ಬೀಗರಿಗೆ ಕೊಡಲಿಕ್ಕೆ. ನಿಮಗ 'ಛಲೋ' 'ಘಡಾ' ಬರೀಲಿಕ್ಕೆ ಬರೋದಿಲ್ಲ. ನಿನ್ನೆ ಕೆಲವು ಹೊಸ ಅಕ್ಷರ ಕಲಿತಿರಲಿಲ್ಲ. ಇವತ್ತು ಕೆಲವು ಕಲಿತುಬಿಡಿರಿ. ಮುಗಿದುಹೋಯಿತು. ಎಷ್ಟು ಲಗುಲಗು ಕಲಿತಿರಿ ನೀವು! ಎಳಿಮಕ್ಕಳು ಸಾಲೀಯೊಳಗ ಇವೇ ಅಕ್ಷರ ಕಲೀಲಿಕ್ಕೆ ತಿಂಗಳಾನ ತಿಂಗಳ ತೊಗೋತಾರೆ. ಕಥೀಯೊಳಗ ಚಿತ್ರಾ ತಗದು ಕಲತೀರಿ ಅಲ್ಲ? ಅವಷ್ಟು ಅಕ್ಷರ ಬಂದರ ತೀರಿತು. ಉಳಕೀವೆಲ್ಲಾ ಆದರೊಳಗ ಸ್ವಲ್ಪ ಹೆಚ್ಚು ಕಡಿಮೆ ಮಾಡಿ ಬರೀಲಿಕ್ಕೆ ಬರತಾವೆ. ಈಗ 'ಛ' ತೆಗೆದುಕೊಳ್ಳರಿ. 'ಎ' ಬರೆದು ಕೊಂಬುಕೊಟ್ಟು ಕೆಳಗೆ ಒಂದು ಗೀಟು ಕೊಟ್ಟರ ತೀರಿತು. 'ಛ' ಆಗತದ. 'ಛಡಿ,' 'ಛಟ ಛಟ' ಹೀಗೇನೆ ಬರೀಬೇಕು. 'ಛ' ಕ್ಕ ದೊಡ 'ಚ' ಅಂತಾರೆ.

ಘಡಾ ಬರೆಯೋದು ಸಸಾರ. ಪಣತಿ 'ಘಟ್' ಅಂತಾ ಒಡೀತಲ್ಲ? 'ಫ' ಬರೆದು ಅದಕ್ಕೆ ಒಂದು ಬಾಲಾ ಹಚ್ಚಿದರ ತೀರಿತು. ಘ ಆತು. ಇದಕ್ಕ ದೊಡ ಗ ಅಂತಾರೆ. 'ಘಡಾ,' ಘಾಟು ಇದರೊಳಗ ಇದೇ 'ಘ' ಅಕ್ಷರ ಇರತದೆ.

ಡಬರೀಗೌಡರು ಬಾಳೀ ಫಡಾ ಕುದುರೀ ಮೇಲೆ ಇಟ್ಕೊಂಡು ಹೊರಟರು. ತಂಪು ಹೊತ್ತು. ಹಾದಿ ಸಾಗಿತು. ಬಿಸಿಲೇರಿತು. ಕುದುರಿ ನೀರಡಿಸಿತು. ಜಕ್ಕಪ್ಪನ ಊರ ಹತ್ತೀಲೆ ಒಂದು ನೀರಿನ 'ಝುರಿ' ಇತ್ತು. ಕುದುರೀ ನೀರಿಗೆ ಒಯ್ದರು. 'ಝುರಿ' ಯೊಳಗೂ ಒಂದು ಹೊಸ ಅಕ್ಷರ. (ಹಳ್ಳಿಯ ವಯಸ್ಕರು 'ಅಕ್ಸರ' ಅನ್ನುತ್ತಿದ್ದರೂ ಶಿಕ್ಷಕನು 'ಅಕ್ಷರ' ಎಂದೇ ಹೇಳತಾ ಹೋಗಬೇಕು). 'ಝು' ಬರಿಯೋದು ಸಸಾರ. ರಂಜಣಿಗಿ 'ರ' ಬರೆದು ಮುಂದೆ ಎರಡು ಬಾಲಾ ಹಚ್ಚಬೇಕು. ಕೆಳಗೆ ಗೀಟು ಕೊಡಬೇಕು. 'ಝು'ಕ್ಕ ದೊಡ 'ಜ' ಅಂತಾರೆ.

ಡಬರೀಗೌಡರು ಕುದುರೀ ನೀರಿನ ಝುರೀಗೆ ಮೇಲೆ ಕೂತುಕೊಂಡೆ ಒಯ್ದರು. ಕಾಲಾಗಿನ ಕಲ್ಲುಫಡಿ ಹಂಸೆಗಟ್ಟಿತ್ತು. ಕುದುರೀ ಕಾಲು ಜಾರಿತು. ಗೌಡರು ಫಡಾನೆ ಕಡಕೊಂಡು ಬಿದ್ದರು. ಹಿಂದ ಗೌಡರ ಕಥೀ ಕೇಳಿರಲ್ಲ. ಗೌಡರ ಹಲ್ಲು ಮುರೀತು. ಡಾಕ್ಟರರು ಇಕ್ಕಳದಲೆ ಹಲ್ಲು ಕಿತ್ತಿದರು.

ಗೌಡರ **ಊಟ** ಬೀಗರ ಮನೀಯೊಳಗ ಆತು. ಹಾವಿಗೆ ಕೂಸು 'ಉ' ಅಂತಿತ್ತಲ್ಲ. ಅದು ಸಣ್ಣ 'ಉ'. ಇದು ದೊಡ್ಡ 'ಊ' ಊರು, ಊದು, ಹೀಗೇನ ಬರೀಬೇಕು.

ಇಳಿಹೊತ್ತಿನಾಗ ಡಬರೀಗೌಡರು ಜಕ್ಕಪ್ಪ ಪೂಜಾರಿ ಕಡಿಗೆ ಹೋದರು. ಆತ ಇರೋದು ಗುಡಿಯೊಳಗ. ನೀವು ಗುಡಿ, ನಳ, ಈಶ್ವರಲಿಂಗ ಎಲ್ಲಾನೂ ನೋಡಿರಲ್ಲ? ಗೌಡರೂ ನಳಧಾಗ ಕಾಲು ತೊಳೆದರು. ಗಂಟೆ ಬಾರಿಸಿದರು. ಈಶ್ವರಲಿಂಗಕ್ಕೆ ಜಕ್ಕಪ್ಪ ಪೂಜಾರಿ **ಶಂಖ**ದಲೆ ಜಳಕ ಮಾಡಿಸತಿದ್ದ. ನೀವು ಶಂಖಾ ನೋಡಿರಲ್ಲ. 'ಶ' ಅಕ್ಷರನೂ ಶಂಖದಂತೇನ ಅದ. ಇದು 'ಶ' ಶಂಕರ, ಈಶ, ಶಾಂತಿ, ಇದರೊಳಗ ಇದೇ 'ಶ' ಅಕ್ಷರ ಇರತದೆ.

ಗೌಡರು ದೇವರಿಗೆ **ಅರಿಷಣ** ಕುಂಕುಮ ಏರಿಸಿದರು. 'ಅರಿಷಣ' ಇದರೊಳಗ ನಿಮಗ 'ಷ' ಬರೀಲಿಕ್ಕೆ ಬರೂದಿಲ್ಲ. ಅದು ನಿಮಗ ಹೊಸ ಅಕ್ಷರ. ಪಣತೀ 'ಪ' ಬರೆದು ಗಂಟು ಕೆಳಗೆ ಇಳಿಸಿದರಾತು. 'ಷ' ಆಗತದ. ಷಡಕ್ಷರಿ, ಕಷಾಯ, ಔಷಧ ಇವುಗಳಲ್ಲಿ 'ಷ' ಹೀಗೇನೆ ಬರೀಬೇಕು.

ಗೌಡರು ದೇವರಿಗೆ ಕಪ್ಪುರದ **ವಡಿ** ಕೊಟ್ಟರು. 'ವಡಿ' ಇದರೊಳಗ ನಿಮಗೆ ಯಾವ ಅಕ್ಷರ ಬರೋದಿಲ್ಲ? 'ವ' ಹೌದು. ಎಲೀ 'ಎ' ಬರೆದು

ಕೊಂಬುಕಟ್ಟಿದರಾತು. 'ವ' ಆಗತದ. ವಕೀಲ, ವಾರಸಾ, ಕವಡಿ, ಇಷ ಗಳಲ್ಲಿ ಇದೇ 'ವ' ಇರತದೆ.

ಡಬರೀಗೌಡರು ಊರಿಂದ ಬಾಳೀ ಫಡಾ ತಂದಿದ್ದರಲ್ಲ. ಅದರಾಗಿಂ ಜೋಡುಹಣ್ಣು ದೇವರ ಮುಂದ ಇಟ್ಟರು. ಗೌಡರು ಹೋದಮೇಲೆ ಇದೆ ಹಣ್ಣು ತಿನ್ನಲಿಕ್ಕೆ ಇಲಿ ಬಂದದ್ದೂ ಜಕ್ಕಪ್ಪ ಹರಳು ಒಗೆದದ್ದೂ ನಿಮಗ ಎಲ್ಲಾ ನೆನಪು ಅದ ಅಲ್ಲ?

ಡಬರೀಗೌಡರು ದೇವರಿಗೆ ಕೈಜೋಡಿಸಿ ಬೇಡಿಕೊಂಡರು. "ಉಮಾಪತೆ, ಶಂಭೋ, ನಾನು **ಅಜ್ಞ, ಕ್ಷಮಿಸು'** !–ಎಂದು. 'ಅಜ್ಞ' ಇದರಾಗ ಒಂದ ಬುಡಕ ಒಂದು ಅಕ್ಷರ ಬರದದ ಅಲ್ಲ? ಹೌದು. ಹಿಂದೆ ಹೇಳಿದೆನೆಲ್ಲ ನಿಮಗ. ಅದು ಜೋಡು ಅಕ್ಷರ. 'ಜ'ದ ಕೆಳಗ 'ಞ' ಬರೀಬೇಕು. ಅಜ್ಞ, ತಜ್ಞ, ಜ್ಞಾನ ಎಲ್ಲಾದರಾಗೂ ಇದೇ 'ಜ್ಞ' ಇರತದೆ. 'ಕ್ಷ' ಆದರೂ ಹೀಗೇ. 'ಷ'ದ ಕೆಳಗಿನದು ಬರೆದು ಮೇಲೆ 'ಕ' ಬರೀಬೇಕು. ದೇವರು ಕರುಣಾಳು. ಗೌಡರಿಗೆ ಗುಣ ಆತು. ಒಳ್ಳೇ ಬುದ್ಧೀನೂ ಕಲಿತರು. ಈಗ ಮೊದಲಿನ ಹಾಗೆ ಜಬರು ಮಾಡೋದಿಲ್ಲ. ಡೌಲೂ ಮಾಡೂದಿಲ್ಲ. ಆಳಿನ ಕೂಡ ದುಡಿತಾರ. ಆಳೂ ಹೋಳೂ ಬಹಳ ದಯಾದಿಂದ ನೋಡತಾರ. ಈಗ ಕಥೀ ಮುಗಿತು. ನೀವೂ ಎಲ್ಲಾ ಅಕ್ಷರ ಕಲಿತರಿ. ಇನ್ನು ಕೆಲವು ಜೋಡಕ್ಷರ ಅವೆ. ನಾಳೆ ಕಲಿಯೋಣಲ್ಲ? ಬರ್‍ರಿ ನಮಸ್ಕಾರ.

## *ಪಾಠ ಆರನೇದು, ಏಳನೇದು ಹಾಗೂ ಎಂಟನೇದು

ನಿನ್ನೆ ಹೇಳಿದೆನಲ್ಲಾ ಇವತ್ತು ಜೋಡು ಅಕ್ಷರಗಳನ್ನು ಕಲಿಯೂದು ಅಂತಾ. ಕಲೀತೀರಾ? ಏನೂ ಬಿಗಿಯಿಲ್ಲ. ನೀವು ಕಲಿತ ಅಕ್ಷರದೊಳಗ ಚೂರುಚಾರು ಬದಲು ಮಾಡೋದು. ಒಳ್ಳೇದು. ನಾ ಏನೋ ಫಳದ ಮೇಲೆ ಬರೆದೀನಿ. ಅದು ನಿಮಗೆ ಬರೋಬರಿ ಓದಲಿಕ್ಕೆ ಬರತದ ಏನು ನೋಡಿರಿ.

" ಮಲ್ಲಮ್ಮನು ತನ್ನ ಗಂಡನನ್ನು ಪ್ರೀತಿಸುತ್ತಿದ್ದಳು. ಆತನೇ ದೇವರೆಂದು ತಿಳಿದಿದ್ದಳು. ಚೆನ್ನಮಲ್ಲಿಕಾರ್ಜುನನ್ನು ಹೊಗಳುತ್ತ ಆತನಲ್ಲಿ ಭಕ್ತಿಯನ್ನು ಮಾಡುತ್ತಿದ್ದಳು. ಅವಳು ಅಕ್ಕಮಹಾದೇವಿಯಂತೆ ಶ್ರೇಷ್ಠ ಶಿವಭಕ್ತಳು. . ."

ನಿಮಗೆ ಬಂದಂತೆ ಓದಿರಿ ನೋಡೋಣ: ' ಮಲಮನು ತನ ಗಂಡನನು ಪೀತಿಸುತಿದಳು. . . . ' ಏನಾದರೂ ಅರ್ಥವಾಗತದೇನು ?–ತಿಳೀತದ ಏನು ? ' ಮಲಮನು ' ಹೋಗಿ ' ಮಲ್ಲಮ್ಮನು ' ಹೇಗೆ ಮಾಡಿದೆ ಇಲ್ಲಿ? ' ಕೆಳಗೆ ಏನೊ ಬರೆದಿದೆ ಅಲ್ಲವೆ? ' ಹೌದು. ಹೀಗೆ ಕೆಳಗೆ ಬರೆದವುಗಳಿಗೆ ' ಒತ್ತು ' ಗಳೆನ್ನುವರು. ಇಂಥ ಅಕ್ಷರಗಳಿಗೆ ' ಒತ್ತಕ್ಷರ 'ಗಳೆನ್ನುವರು. ಒತ್ತಕ್ಷರ-ಗಳು ಬರದಿದ್ದರೆ ನೀವು ಸರಿಯಾಗಿ ಓದಲಾರಿರಿ, ಬರೆಯಲಾರಿರಿ. ಅದಕ್ಕಾಗಿ ಈದಿನ ಅವುಗಳನ್ನು ಕಲಿಯೋಣ.

ಒತ್ತಕ್ಷರದೊಳಗೆ ಒಂದು ಅಕ್ಷರದ ಕುತ್ತಿಗೆಯ ಮೇಲೆ ಮತ್ತೊಂದು ಅಕ್ಷರವು ಕೂತಿರುವದು. ' ಆನೀ ಕಿರ್ ' ' ಕಾನ ಕಾನ ಉತ್ತುತ್ತಿ ' ಆಡು-ವಾಗ ಒಬ್ಬರ ಹೇಗಲಮೇಲೆ ಮತ್ತೊಬ್ಬರು ಕೂಡುದಿಲ್ಲ? ಹಾಗೆಯೆ.

ನೀವು ಕಲಿತ ಅಕ್ಷರಗಳಲ್ಲಿ ಕೆಲವು ಬಹಳ ಗಟ್ಟಿಮುಟ್ಟ, ಬಹಳ ಬಿರುಸು. ಮೇಲಿನ ಅಕ್ಷರದ ಭಾರಕ್ಕ ಅವು ಏನೂ ಬಾಗೂದಿಲ್ಲ, ಕುಸಿ ಬೀಳೂದಿಲ್ಲ. ಇದು ನೋಡಿರಿ. **ಖ, ಙ ;–ಜ, ಝ, ಞ ;–ಟ, ಣ ;–ಬ, ಭ ;–ಷ, ಜ್ಞ ;** ಇವು ಇಷ್ಟು ಇಂಥಾ ಗಟ್ಟಿ, ಬಿರುಸು ಅಕ್ಷರಗಳು. ' ಲೆಖ್ಖ '–' ಖ 'ದ ಮೇಲೆ ' ಖ ' ಕೂತಿದೆ. ಏನೂ ಬದಲು ಇಲ್ಲ. ಅಜ್ಜ–' ಜ ' ದ

---

* ಒತ್ತಕ್ಷರಗಳೆಲ್ಲವನ್ನೂ ಒಂದೇ ಸಾರಿ ತೆಗೆದುಕೊಳ್ಳದೆ ೩ ಪಾಠಗಳಲ್ಲಿ ತೆಗೆದುಕೊಳ್ಳುವದು ವಿಹಿತವಾದುದು.

ಮೇಲೆ 'ಜ' ಕೂತಿದೆ. ಏನೂ ಬದಲು ಇಲ್ಲ. (ಇದರಂತೆ ಅಟ್ಟ, ಅಣ್ಣ, ಜಕ್ಕಣ್ಣ, ಹಬ್ಬ.... ಇತ್ಯಾದಿಗಳಲ್ಲಿ ಒತ್ತಿನ ಅಕ್ಷರವು ಹೇಗೆ ಬದಲಾಗದೆ ಉಳಿಯುವದೆಂಬುದನ್ನು ಶಿಕ್ಷಕರು ಅನೇಕ ಉದಾಹರಣೆಗಳಿಂದ ತೋರಿಸಬೇಕು. ಬರೆಯಿಸಿ ರೂಢವಾಗುವಂತೆ ಮಾಡಬೇಕು).

ಇನ್ನು ಕೆಲವು ಅಕ್ಷರಗಳು ಇಷ್ಟು ಬಿರುಸು ಆಗಿಲ್ಲ. ಮೇಲಿನ ಅಕ್ಷರದ ಭಾರಕ್ಕೆ ಅವುಗಳ ಕೊಂಬು ಅಷ್ಟೇ ಕಡಿದು ಹೋಗುವದು. ಇದು ನೋಡಿರಿ: 'ಅಕ್ಕ'ದಲ್ಲಿ 'ಕ'ದ ಕೊಂಬು ಮಾತ್ರ ಹೋಗಿದೆ. '್ಕ' ಇದಕ್ಕೆ 'ಕ'ದ ಒತ್ತು ಅನ್ನುವರು. ರೊಕ್ಕ, ಮುಕ್ಕು, ಬಕ್ಕರಿ. ಎಲ್ಲಾದರಲ್ಲಿ 'ಕ'ದ ಒತ್ತು ಇರುವದು.

## ಕೊಂಬು ಕಳೆದುಕೊಳ್ಳುವ ಒತ್ತಕ್ಷರಗಳು

| ಅಕ್ಷರ | — | ಒತ್ತು | — | ಉದಾಹರಣೆ | |
|---|---|---|---|---|---|
| ಕ | — | ್ಕ | — | ಅಕ್ಕ, ಚಿಕ್ಕ | ಇತ್ಯಾದಿ |
| ಗ | — | ್ಗ | — | ಅಗ್ಗ, ಮುಗ್ಗ | ,, |
| ಘ | — | ್ಘ | — | — | ,, |
| ಚ | — | ್ಚ | — | ಬಚ್ಚ, ಚೊಚ್ಚಲ | ,, |
| ಛ | — | ್ಛ | — | 'ಅಚ್ಛಾದ ಕೂಸು | ,, |
| ಠ | — | ್ಠ | — | ಲಠ್ಠ, ಮುಟ್ಠಾಳ | ,, |
| ಡ | — | ್ಡ | — | ಗೊಡ್ಡ, ಗಿಡ್ಡ | ,, |
| ಢ | — | ್ಢ | — | 'ಬುಡ್ಢಾ' | ,, |
| ಥ | — | ್ಥ | — | ಪಿತ್ಥ | ,, |
| ದ | — | ್ದ | — | ಉದ್ದ, ಜಿದ್ದು | ,, |
| ಧ | — | ್ಧ | — | ಬುದ್ಧ | ,, |
| ಪ | — | ್ಪ | — | ಅಪ್ಪ, ತುಪ್ಪ | ,, |
| ಫ | — | ್ಫ | — | — | ,, |
| ಶ | — | ್ಶ | — | ಉಶ್ಶೆಂದು ಕುಳಿತ | ,, |
| ಷ | — | ್ಷ | — | ಅಕ್ಷರ | ,, |
| ಸ | — | ್ಸ | — | ಲುಕ್ಸಾನ, ಉತ್ಸಾಹ | ,, |

| ಅಕ್ಷರ | | ಒತ್ತು | | ಉದಾಹರಣೆ | |
|---|---|---|---|---|---|
| ಹ | — | ್ಹ | — | ಮಧ್ಯಾನ್ಹ | ಇತ್ಯಾದಿ |
| ಳ | — | ್ಳ | — | ಒಳ್ಳ್ಯ, ಕಳ್ಳ | ,, |
| ಋ | — | ೃ | — | ಮೃಗ, ಋಷಿ | ,, |

ಮೇಲಿನವು ಎಲ್ಲಾ ಆಷ್ಟು ಗಟ್ಟಿ ಅಕ್ಷರಗಳಲ್ಲ. ಅವುಗಳ ಕೊಂಬು ಒಂದೇ ಹೋಗಿಬಿಡುತ್ತದೆ. ಇನ್ನೂ ಕೆಲವು ಅಕ್ಷರಗಳು ಬಹಳೇ ಮಿದುವು. ಮೇಲಿನ ಭಾರಕ್ಕೆ ಅವುಗಳ ಆಕಾರನ್ನೇ ಬದಲು ಆಗಿಹೋಗಿದೆ. 'ಹೊಗಳುತ್ತ'– ಇದರಲ್ಲಿ ಮೇಲಿನ ಅಕ್ಷರದ ಭಾರಕ್ಕೆ ಕೆಳಗಿನ 'ತ' ಬದಲಾಗಿ ಬಿಟ್ಟದೆ. '್ತ' ಇದು 'ತ'ದ ಒತ್ತು. ಭಕ್ತ, ರಕ್ತ. ಎಲ್ಲದರಲ್ಲಿಯೂ ಹೀಗೆಯೆ. ಇದೇ ರೀತಿಯಾಗಿ:

| ಅಕ್ಷರ | | ಒತ್ತು | | ಉದಾಹರಣೆ | |
|---|---|---|---|---|---|
| ತ | — | ್ತ | — | ಭತ್ತ, ಆಪ್ತ, ಹೊತ್ತು | ಇತ್ಯಾದಿ |
| ನ | — | ್ನ | — | ಅನ್ನ, ಲಗ್ನ, ಅದ್ನ | ,, |
| ಮ | — | ್ಮ | — | ಅಮ್ಮಾ, ಪದ್ಮ, ಕೆಮ್ಮು | ,, |
| ಯ | — | ್ಯ | — | ಅಯ್ಯ, ಕ್ಯಾವಿ, ಒಡ್ಯಾಣ | ,, |

ಇನ್ನು ಒಂದೇ ಕಡೀದು. ರಂಜಣಿಗಿ 'ರ' ಬಹಳ ಬದಲಾಗಿಬಿಡತದ. ಮೇಲಿನ ಅಕ್ಷರದ ಭಾರಕ್ಕ ಕುಸಿದುಹೋಗಿ ಅರ್ಧಾ ಚಂದಪ್ಪ ಆಗಿಬಿಡತದ. 'ರ' ಅದರ ಒತ್ತು ್ರ ಆಗತದೆ. 'ಕರ್ರಗೆ, ಸಕ್ರಿ, ಕತ್ರಿ' ಇವುಗಳಲ್ಲಿ 'ರ' ಕೆಳಗಿನ ಅಕ್ಷರ ಇದ್ದರ, ಮೇಲಿನ ಭಾರಕ್ಕ ಅರ್ಧಚಂದಪ್ಪನಂತೆ ್ರ ಆಗತದ.

ಒಮ್ಮೊಮ್ಮೆ 'ರ' ಮೇಲಿನ ಅಕ್ಷರ ಆಗಿದ್ದರೂ, ತಾನೇ ಮೇಲೆ ಕೂತಿದ್ದರೂ ಬದಲಾಗಿ 'ೲ'ರ ಅಂಕೀಗತಿ ಆಗತದ. ಗರ್ಕ, ಬರ್ಫ, ಚಿರ್ಚ ಇವುಗಳಲ್ಲಿ 'ರ' ಮೇಲಿನ ಅಕ್ಷರ. ಆದರೂ ಬದಲಾಗತದ. 'ೲ' ಈ ಗುರ್ತಿಗೆ ಅರ್ಕಾವಳಿ ಅನ್ನತಾರೆ. ಇದನ್ನ ಬಿಟ್ಟು ಗರ್ಕ, ಬರ್ಫ, ಚಿರ್ಚ ಹೀಂಗೂ ಬರೀತಾರ. ಅದೂ ಬರೋಬರಿ. ನಿಮಗ ಎರಡೂ ಗೊತ್ತಿರಲಿ ಅಂತಾ ತೋರಿಸಿದೆ.

ಇನ್ನೊಂದು ಅಕ್ಷರವಿದೆ. ಕಿವಿಗೆ 'ರ'ದ ಹಾಗೆ ಕೇಳಿಸತದೆ. ಆದರೆ ಅದು ಬೇರೆ ಅಕ್ಷರ. ಅದನ್ನು ಹೀಗೆ 'ಋ' ಅನ್ನಬೇಕು. ಬರೆಯಬೇಕು. 'ಖಟಿಪಿಟಿ' ಯೊಳಗ 'ಖ' ಬರೆದಿರಲ್ಲ. 'ಖ'ಕ್ಕೆ ಮೇಲೆ ಕೊಂಬುಕೊಟ್ಟು ಹಾದೀಮಾಲಗಂಬ ಹಚ್ಚಿದರಾತು. ಅದು 'ಋ' ಆಗತದೆ. 'ಋ' ಬೇರೆ ಅಕ್ಷರದ ಕೂಡ ಕೂಡಿಕೊಂಡರೆ ಅದರ ಒತ್ತು 'ೃ'–'ಲ'ದ ಹಾಗೆ ಆಗತದೆ.

ಕ–ಋ, ಕೃ, 'ಮೃಗ'–ದ ಮಳಿ; 'ಕೃಷ್ಣ' ಹೀಗೆಯೇ ಬರೆಯಬೇಕು.

ಒಳ್ಳೇದು, ನೀವು ಅಕ್ಷರದೊಳಗ ಏನೇನು ಕಲೀಬೇಕು ಅದನ್ನೆಲ್ಲಾ ಇಲ್ಲಿ ಕಲಿತಂತಾತು. ನೋಡಿದಿರಾ? ಮೊನ್ನೆಮೊನ್ನೆ ಸುರುವು ಮಾಡಿದೆವು. ಎಷ್ಟು ಲಗುಲಗು ಕಲಿತುಬಿಟ್ಟರಿ ನೀವು?

ಇನ್ನು ನೀವು 'ನಾನೂ ಓದತೀನಿ' ಅಂತಾ ಹೇಳಬೇಕು. ನೀವು ಓದೂಹಾಂಗ ಬಹಳ ಸಸಾರಾಗಿ ಬರೆದ ಮಾಟಮಾಟ ಪುಸ್ತಕ ನಿಮಗ ಕೊಡತಾರ.

ಆದರ ಹಿಂದೆ ನಿಮಗ 'ಬಳ್ಳಿ' ಅಂತಾ ಹೇಳಿದೆನಲ್ಲಾ. ಇನ್ನೊಮ್ಮೆ ಅವನ್ನೆಲ್ಲಾ ಒತ್ತಟ್ಟಿಗೆ ಕಲಿಯೋಣ, ಒತ್ತಟ್ಟಿಗೆ ಬರಿಯೋಣ. ಅಂದರ ನಿಮಗೆ ಭರಾಭರಾ ಓದಲಿಕ್ಕೆ ಬರತದ.

ಆಮೇಲೆ ನಿಮಗ ಎಣಿಸಲಿಕ್ಕೆ ಬರತದ ಅಲ್ಲಾ. ಒಂದು, ಎರಡೂ ಅಂತಾ. ಅದನ್ನೇ ಹೇಗೆ ಬರೀಬೇಕು ನಿಮಗೆ ಗೊತ್ತಿಲ್ಲ. ಒಂದು (೧) ಹೀಗೆ ಬರೀತಾರೆ. ಇವಕ್ಕೆಲ್ಲಾ ಅಂಕಿ ಅಂತಾರೆ.

ಇಷ್ಟು ಕಲಿತುಬಿಡಿ. ಆಮೇಲೆ ನಿಮ್ಮ ಕೈಹಿಡಿಯುವವರಿಲ್ಲ. ನಾಳಿಗೇನು? ನೆನಪದನ? 'ಬಳ್ಳಿ' ಹೌದು.

ಒಳ್ಳೇದು ಬರ್ರಿ. ನಮಸ್ಕಾರ.

# ಪಾಠ ಒಂಭತ್ತನೇದು

ಎಲಿ ಒಂದರಾಗ ಒಂದು ಕೂಡಿಕೊಂಡು ಸಾಲಾಗಿ ಬೆಳೀತಾವಲ್ಲ? ಬಳ್ಳೀಯೊಳಗ. ಹಾಗೆಯೇ ಕೂಡಿಕೊಂಡ ಅಕ್ಷರಗಳನ್ನು ಸಾಲಾಗಿ ಬರೀ-ತೀವಲ್ಲ ಅದಕ್ಕೇನೆ ಅಕ್ಷರಗಳ 'ಬಳ್ಳಿ' ಅನತಾರೆ. ಹಿಂದೆ ಹೇಳಿದ್ದೆನಲ್ಲ ನಿಮಗ ಇದನ? ಬಳ್ಳೀ ಕಟ್ಟೋದು–ಬಳ್ಳೀ ಬರೆಯೂದು ನಿಮಗ ಈಗ ಬರತದೆ. ಅದನ್ನೇ ನಿಮಗೆ ಮತ್ತೊಮ್ಮೆ ನೆನಪುಮಾಡಿಕೊಡತೇನೆ. ಒತ್ತಟ್ಟಿಗೆ ಎಲ್ಲಾ ಬಳ್ಳೀನೂ ಓದಿಬಿಡೋಣ. ಬರೆದುಬಿಡೋಣ.

ಮೊದಲನೇದು 'ಕ'.

'ಕ' ಕ್ಕೆ ( ಕೊಂಬು ತೆಗೆದು ) ಕಾಲು ಹಚ್ಚಿದರೇನಾಯಿತು? ಕಾ.

'ಕ' ಕ್ಕೆ ಗಿಳಿಮೂಗು ಹಚ್ಚಿದರೇನಾಯಿತು? ಕಿ.

'ಕ' ಕ್ಕೆ ಗಿಳಿಮೂಗು ಹಚ್ಚಿ ಮುಂದೆ ಝುಲಾರಿ ಹಚ್ಚಿದರೆ? ಕೀ.

'ಕ' ಕ್ಕೆ ಹಾದೀ ಮಾಲಗಂಬ ಮುಂದೆ ಝುಲಾರಿ ಹಚ್ಚಿದರೆ? ಕು.

'ಕ' ಕ್ಕೆ ಹಾದೀ ಮಾಲಗಂಬ ಹಚ್ಚಿ ಮುಂದೆ ಒಂದು ಕಾಲು ಹಚ್ಚಿದರೆ? ಕೂ.

'ಕ' ದ ಕೊಂಬು ಇಟ್ಟು ಅದಕ್ಕ ಗಿಳಿಮೂಗು ಹಚ್ಚಿದರೆ? ಕೆ.

'ಕ' ದ ಕೊಂಬು ಇಟ್ಟು ಅದಕ್ಕ ಗಿಳಿಮೂಗು ಹಚ್ಚಿ ಮುಂದೆ ಝುಲಾರಿ ಹಚ್ಚಿದರೆ? ಕೇ.

'ಕ' ಕ್ಕೆ ಕೈ ಹಚ್ಚಿದರೆ? ಕೈ.

'ಕ' ದ ಕೊಂಬಿಗೆ ಗಿಳಿಮೂಗು ಹಚ್ಚಿ ಮುಂದೆ ಕೋಳಿ ( ಹುಂಜ ) ಪುಚ್ಚ ಹಚ್ಚಿದರೆ? ಕೊ.

'ಕೊ' ಕ್ಕೆ ಝುಲಾರಿ ಹಚ್ಚಿದರೆ? ಕೋ.

‘ ಕೆ ’ ಕ್ಕೆ ಕೊಂಬಿಗೆ ಮತ್ತೊಂದು ಗಂಟುಗಟ್ಟಿ ಕಾಲು ಹಚ್ಚಿದರೆ? ಕೌ.

‘ ಕ ’ ದ ಮುಂದೆ ಒಂದೇ ಪೂಜಿಯನ್ನಿಟ್ಟರೆ ? ಕಂ.

‘ ಕ ’ ದ ಮುಂದೆ ಎರಡು ಪೂಜಿಯನ್ನಿಟ್ಟರೆ? ಕಃ.

* ಇದು ‘ ಕ ’ ದ ಬಳ್ಳಿ: ಕ, ಕಾ, ಕಿ, ಕೀ, ಕು, ಕೂ, ಕೆ, ,ಕೇ ಕೈ, ಕೊ, ಕೋ, ಕೌ, ಕಂ. ಕಃ. ಹೀಗೆಯೇ ಖ, ಖಾ . . . . . . . .

* ಕೊಂಬು ಇಲ್ಲದಲ್ಲಿ ಆಗುವ ಹೆಚ್ಚುಕಡಿಮೆಯನ್ನು ಶಿಕ್ಷಕರು ಎತ್ತಿ ತೋರಿಸಬಹುದು.

# ಪಾಠ ಹತ್ತನೇದು

ನಿಮಗ ಎಲ್ಲಾರಿಗೂ ಎಣಿಸಲಿಕ್ಕೆ ಬರತದ. ರೊಕ್ಕಾ ಕೊಡತೀರಿ, ತೊಗೋತೀರಿ. ನಿಮ್ಮ ಹೆಣ್ಮಕ್ಕಳು ಹತ್ತು ಮನಿಗೆ ಹಾಲು, ಮೊಸರು, ಬೆಣ್ಣಿ ಹಾಕಿರತಾರ. ಪಾವು, ನವುಟಾಕು, ದುಡ್ಡು-ಪೈ ಚೊಕ್ಕ ಲೆಖ್ಖಾ ಹೇಳತಾರ. ಆದರೆ ಅದನ್ನೇ ಬರೀಲಿಕ್ಕೆ ಬರೂದಿಲ್ಲ ಇಷ್ಟೆ. ಅಂದರ ನಿಮಗೆ ಅಂಕಿ ಬರೂದಿಲ್ಲ. ಅಂಕೀನೂ ಕಲಿತುಬಿಡಿರಿ.

| | | |
|---|---|---|
| ಒಂದು | ಹೀಗೆ ಬರೆಯುವಮ | ೧ |
| ಎರಡು | ,, | ೨ |
| ಮೂರು | ,, | ೩ |
| ನಾಲ್ಕು | ,, | ೪ |
| ಐದು | ,, | ೫ |
| ಆರು | ,, | ೬ |
| ಏಳು | ,, | ೭ |
| ಎಂಟು | ,, | ೮ |
| ಒಂಭತ್ತು | ,, | ೯ |
| ಹತ್ತು | ,, | ೧೦ |

ಹತ್ತರಲ್ಲಿ ಒಂದು ಕೂಡಿಸಿದರೆ

| | | |
|---|---|---|
| ೧೦ + ೧ | ,, | ೧೧ |
| ೧೦ + ೨ | ,, | ೧೨ |
| ಹತ್ತಕ್ಕೆ ಹತ್ತು | ,, | |
| ೧೦ + ೧೦ | ,, | ೨೦ |

( ಈ ರೀತಿಯಾಗಿ ಎರಡು ಪರೀಕ್ಷೆ [ಟೆಸ್ಟ್ಸ] ಮುಗಿಯುವದರೊಳಗಾಗಿ ಸುಮಾರು ಆರು ತಿಂಗಳಲ್ಲಿ ಅವರಿಗೆ ನೂರರ ವರೆಗೆ ಅಂಕಿಗಳ ಜ್ಞಾನವಾದ ರಾಯಿತು. ಇದರ ಜೊತೆಗೆ ಹತ್ತರಗಂಟು-ಬಿಡಿಗಾಳು - ಎಂದು ಸುಲಭ ವಾಗಿ ಕೂಡಿಸುವದು-ಕಳೆಯುವದನ್ನು ಬಾಲಕರಿಗೆ ಹೇಳುವ ರೀತಿಯಲ್ಲಿಯೇ ಅವರಿಗೆ ತಿಳಿಸಿಕೊಡಬಹುದು ).